

# ಮುನ್ನುಡಿ.



ಕರ್ನಾಟಕ ಸಮ್ರಾಟನೂ ದಿವ್ಯಪ್ರತಾಪನಿಧಿಯೂ ಆದ ಚಾಲುಕ್ಯರ ಎರಡನೆಯ ಪುಲಿಕೇಶಿಯು ಕನ್ಯಕುಬ್ಜದ ಸಾರ್ವಭೌಮನಾದ ಹರ್ಷವರ್ಧನನನ್ನು ನರ್ಮದೆಯ ಮಹಾ ಸಂಗ್ರಾಮದಲ್ಲಿ ಸೋಲಿಸಿ, ಕನ್ನಡಿಗರ ವಿಜಯದುಂದುಭಿಯನ್ನು ದಶದಿಶೆಗಳಲ್ಲಿ ನಿನಾದಗೊಳಿಸಿದ ಸಂಗತಿಯು ಕರ್ನಾಟಕ ಗೌರವ ಮಂಡಿತ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಪ್ರಕಟಿಸುವಂತಹದಿರುವದು. ಇರಾಣದ ಚಕ್ರವರ್ತಿಯಾದ ಎರಡನೆಯ ಖುಶ್ರುವು ರೋಮಾಯರ ಕಾಟವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಈ ಕನ್ನಡ ಕಲಿಯಲ್ಲಿ ಸಹಾಯವನ್ನು ಯಾಚಿಸಿದ್ದನ್ನು ನೋಡಿದರೆ, ಕರ್ನಾಟಕದ ಕೀರ್ತಿಪ್ರಭೆಯು ಪರದ್ವೀಪಗಳಲ್ಲಿ ಸಹ ಚೆನ್ನಾಗಿ ಬೆಳಗುತ್ತಿತ್ತೆಂಬುದು ನಿರ್ವಿವಾದವಾಗಿ ಹೇಳಬಹುದು.

ವಿಕ್ರಮಾರ್ಜಿತ ಸತ್ವಶಾಲಿಯಾದ ಈ ಪುಲಿಕೇಶಿಯ ಅಂತ್ಯಕಾಲವು ಅತ್ಯಂತ ಚಿಂತಾಜನಕವಾಗಿ ಪರಿಣಮಿಸಿತು. ಇವನ ಮಕ್ಕಳಲ್ಲಿ ರಾಜ್ಯದ ಸಲುವಾಗಿ ವ್ಯಾಜ್ಯವು ಉಪಸ್ಥಿತವಾಗಿ, ಕಡೆಗೆ ಅದರ ಪರ್ಯವಸಾನವು ಅತ್ಯಂತ ಭೀಷಣವಾದ ಸ್ಥಿತಿಯಲ್ಲಿ ಜರುಗಿತು. ಭಾಗ್ಯಶಾಲಿಯಾದ ಈ ಸಮ್ರಾಟನು ಬೇನೆಯಿಂದ ಮೃತ್ಯುಪಥವನ್ನು ಹಿಡಿದಿರುವಾಗ, ವೈರಿಯು ರಾಜಧಾನಿಯನ್ನೂ ರಾಜಮಂದಿರವನ್ನೂ ವಿಧ್ವಂಸಗೊಳಿಸಿದ ವಾರ್ತೆಯನ್ನು ಕೇಳಿ ಎದೆಯೊಡೆದು ಸಾಯುವ ಪ್ರಸಂಗವೊದಗಿದ ಮೇಲೆ ಈ ಘಟನೆಗೆ ಈಶಸಂಕಲ್ಪ! ವೆನ್ನದೆ ಮತ್ತೇನು ಹೆಸರಿಡಬೇಕು?

ಶ್ರೀಯುತ ರಾ. ಹ. ದೇಶಪಾಂಡೆಯವರ ಕರ್ನಾಟಕ ಸಾಮ್ರಾಜ್ಯವೂ, ಶ್ರೀಯುತ, ಜಾಲೂರರವರ ಕರ್ನಾಟಕ ಗತವೈಭವವೂ, ಕರ್ನಾಟಕ ಕೈಪಿಡಿಯೂ, ಶ್ರೀಯುತ ಪಾಂಡುರಂಗ ಗೋವಿಂದ ಶಾಸ್ತ್ರೀ ಪಾರಖಿಯವರ 'ಶ್ರೀ ಹರ್ಷ' ನಿಬಂಧವೂ ಈ ಚಿಕ್ಕ ಕಥೆಯನ್ನು ಬರೆಯಲಿಕ್ಕೆ ಸಹಾಯವಾದುದರಿಂದ, ಆ ಎಲ್ಲ ಗ್ರಂಥಕರ್ತರಿಗೆ ನಾನು ತುಂಬಾ ಋಣಿಯಾಗಿರುವೆನು.

ಶ್ರೀ ಶೇಷಾಚಲ ಗ್ರಂಥಮಾಲೆಯ ಸಂಪಾದಕರಾದ ಶ್ರೀಯುತ ಭಿ. ಪ. ಕಾಳೆ ಇವರ ಪ್ರೋತ್ಸಾಹನೆಯಿಂದ ನನ್ನ ಲೆಕ್ಕಣಿಕೆಗೆ ಚಾಲನೆಯು ದೊರೆತದ್ದರಿಂದ, ಈ ಮಹಾನುಭಾವರ ಉಪಕಾರವು ಚಿರಸ್ಮರಣೀಯವಾಗಿರುವದು ಕನ್ನಡ ವಾಙ್ಮಯ ಸೇವೆಯನ್ನು ಮಾಡಬೇಕೆನ್ನುವ ನನ್ನ ಉತ್ಸಾಹವನ್ನು ವೃದ್ಧಿಂಗತ ಮಾಡುವ ಕಾರ್ಯವು ಕರ್ನಾಟಕ ವಾಙ್ಮಯ ಪ್ರೇಮಿಗಳನ್ನೇ ಅವಲಂಬಿಸಿರುವದು. ಸದ್ಗುರುವು ಎಲ್ಲರ ಇಚ್ಛೆಗಳನ್ನು ಕೈಗೂಡಿಸಲಿ!

| | |
|---|---|
| ಬನ್ನಿಕೊಪ್ಪ, ತಾ॥ ೧೪--೧೨--೧೯೩೨ | ಕನ್ನಡಿಗರ ವಿಧೇಯ, ನಾಗೇಶ. |

---

## ಪ್ರಕಾಶಕನ ಬಿನ್ನಹ.

ನಮ್ಮ ಪ್ರಿಯ ಮಿತ್ರ ಶ್ರೀ. ನಾಗೇಶರವರು ಬರೆದ "ಸತ್ಯಮೇವ ಜಯತೇ" ಎಂಬ ಪುಲಿಕೇಶಿಯ ಸಂಬಂಧದ ಹೃದಯಂಗಮ ಪುಸ್ತಕವು ಈ ಮೊದಲೇ ಶ್ರೀ. ಶೇ. ಗ್ರಂ. ಮಾಲೆಯಲ್ಲಿ ಪ್ರಕಟವಾಗಿ ನಮ್ಮ ವಾಚಕರನ್ನು ತೃಪ್ತಿಬಡಿಸಿದೆ. ಈ ಕುಶ ಸಂಕಲ್ಪವು ಅದರ ಮುಂದಿನ ಭಾಗವಾದ್ದರಿಂದ, ಇದಾದರೂ ನಮ್ಮ ಕನ್ನಡಿಗರ ಪ್ರೇಮಕ್ಕೆ ಪಾತ್ರವಾಗದಿರದು.

ಶ್ರೀ. ನಾಗೇಶರವರು ತಮ್ಮ ಈ ಕೃತಿಯಿಂದ ಶ್ರೀ. ಶೇ. ಗ್ರಂ. ಮಾಲೆಯನ್ನೂ ತದ್ವಾರಾ ಕನ್ನಡ ವಾಚಕವರ್ಗವನ್ನೂ ಹೆಚ್ಚಾಗಿ ಋಣಿಮಾಡಿಕೊಂಡಿರುವರು ಶ್ರೀಶನು ಶ್ರೀ ನಾಗೇಶರವರಿಗೆ ಸಕಲ ಸೌಖ್ಯಗಳನ್ನೂ ಒದಗಿಸಲಿ! ತಾ॥ 27-1-33 ಪ್ರಕಾಶಕ.

---

# ಈಶ ಸಂಕಲ್ಪ!

## ಉತ್ತರಾಪಥದ ಸಂದೇಶ.

ಕರ್ನಾಟಕ ಸಮ್ರಾಟನಾದ ಎರಡನೆಯ ಪುಲಿಕೇಶಿಯು ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯಾದ ವಾತಾಪಿಪುರದ ಸಿಂಹಾಸನಾರೋಹಣ ಮಾಡಿದ್ದನು ರಾಕ್ಷಸೀ ರಾಜ್ಯಲೋಭಿಯಾದ ಮಂಗಳೇಶನ ಕೊಲೆಯಾಗಿ ಸಾಮ್ರಾಜ್ಯದ ರಾಜ್ಯಸೂತ್ರಗಳೆಲ್ಲವೂ ಇವನ ಕೈಸೇರಿದ್ದವು. ಮಂಗಳೇಶನ ಮರಣದ ತರುವಾಯ ಸಾಮ್ರಾಜ್ಯದೊಳಗಿನ ಮಂಡಲೇಶ್ವರರಲ್ಲಿ ಎಷ್ಟೋ ಜನರು ಸ್ವತಂತ್ರರಾಗಬೇಕೆಂದು ಸಾಹಸ ನಡೆಯಿಸಿದ್ದರು ತರುಣ ಪುಲಿಕೇಶಿಯ ಧೈರ್ಯ-ಶೌರ್ಯ-ಸಾಹಸ-ಚಾತುರ್ಯಗಳಿಂದಲೂ, ನಿಸ್ಸೀಮಸ್ವಾಮಿನಿಷ್ಠರಾದ ಕನ್ನಡ ದಳವಾಯಿಗಳ ಹಾಗು ದಂಡಾಳುಗಳ ಹೋರಾಟದಿಂದಲೂ ಎಲ್ಲ ಮಾಂಡಲಿಕರು ವಾತಾಪಿಪುರ ಸಿಂಹಾಸನಕ್ಕೆ ಬಾಗಿ ನಡೆಯುತ್ತೊಡಗಿದರು. ಈ ವಿಕ್ರಮಶಾಲಿಯಾದ ಸಮ್ರಾಟನು ಕದಂಬ, ಗಂಗ, ಪಲ್ಲವ, ಮೌರ್ಯ, ಲಾಟ, ಮಾಳವ, ಗುರ್ಜರ, ಕಲಿಂಗ, ಪಾಂಡ್ಯ, ಕೇರಳ, ಚೋಳ, ಕೋಶಲ ಮೊದಲಾದ ರಾಜರನ್ನು ಪರಾಭವಗೊಳಿಸಿ, ಎಲ್ಲ ಕಡೆಯಲ್ಲಿಯೂ ತನ್ನ ವರ್ಚಸ್ವವನ್ನು ನೆಲೆಗೊಳಿಸಿದನು. ಈ ಕನ್ನಡಕಲಿಯು ಕನ್ಯಾಕುಮಾರಿಯಿಂದ ರೇವಾ ನದಿಯ ವರೆಗೆ ತನ್ನ ವಿಜಯಧ್ವಜವನ್ನು ಮೆರೆಯಿಸಿದನು. ಕನ್ನಡಿಗರ ಅಭಿಮಾನದ ಹಾಗು ಕರ್ನಾಟಕದ ಕೀರ್ತಿಯ ದ್ಯೋತಕವಾದ ವಾತಾಪಿಪುರದ ಸಿಂಹಾಸನದ ಪ್ರಭೆಯು ದಿಗಂತದಲ್ಲಿ ಪಸರಿಸಿತ್ತು. ಕನ್ನಡಿಗರ ವಿಜಯದ ಪತಾಕೆಯು ಹಿಮಾಚಲದ ವರೆಗೆ ಕಾಣತೊಡಗಿತ್ತು.

ಕರ್ನಾಟಕದ ವಿಜಯಭೇರಿಯು ನಿನಾದವು ಅಖಿಲ ಭಾರತವರ್ಷದಲ್ಲಿ ಕೇಳತೊಡಗಿತ್ತು. ವೀರಕನ್ನಡಿಗರ ಗೆಲವಿನ ಅಬ್ಬರದ ಗುಡುಗು ಪರದ್ವೇಷಿಗಳ ಎದೆಯನ್ನು ನಡುಗಿಸಿತ್ತು. ವಿಶ್ವಮಾಜೇತ ಸತ್ವಶಾಲಿಯಾದ ನೃಪಕುಲತಿಲಕ ಕರ್ನಾಟಕ ಸಮ್ರಾಟ ಸತ್ಯಾಶ್ರಯ ಪುಲಿಕೇಶಿಯು ಕೀರ್ತಿರವಿಯ ಕಿರಣಗಳು ನಮ್ಮ ಸೃಷ್ಟಿಯನ್ನು ಬೆಳಗತೊಡಗಿದ್ದವು. ಈ ಚಾಳುಕ್ಯಕುಲಾವತಂಸನ ವೀರಶ್ರೀಯು ಅಬ್ಬರಕ್ಕೆ ಆಗಿಬಂದವು ಕಂಗೆಟ್ಟಿತ್ತು. ಇಂಥ ಸಾರ್ವಭೌಮನು ಕರ್ನಾಟಕದ ಸಿಂಹಾಸನವನ್ನು ಅಲಂಕರಿಸಿದ್ದು, ಕನ್ನಡಿಗರ ಭಾಗ್ಯವಲ್ಲವೆ?

ಕೀರ್ತಿವರ್ಮನ ಕಾಲದಿಂದ ಅಮಾತ್ಯನಾಗಿದ್ದ ಸತ್ಯಸಮ್ರಾಟ ಸತ್ಯವರ್ಮನು ಇದೀಗ ಅವಸಾನಕಾಲವನ್ನು ಪ್ರವೇಶಿಸಿದ್ದನು. ಅವನ ಸ್ಥಳದಲ್ಲಿ ಸ್ವಾಮಿರಾಜ ಪುತ್ರನಾದ ವೀರಸೇನನು ಅಧಿಷ್ಠಿತನಾಗಿದ್ದನು. ಇವನಾದರೂ ಸತ್ಯವರ್ಮನಂತೆ ಶೂರನೂ, ಚತುರನೂ, ಸ್ವಾಮಿನಿಷ್ಠನೂ ಆಗಿದ್ದನು. ಪುಲಿಕೇಶಿಯು ತನ್ನ ತಮ್ಮಂದಿರಾದ ವಿಷ್ಣುವರ್ಧನ-ಜಯಸಿಂಹರ ಹಾಗು ಮಂತ್ರಿ-ಸೇನಾಪತಿಗಳಾದ ವೀರಸೇನ-ಪ್ರತಾಪವರ್ಮರ ಸಹಾಯದಿಂದ ರಾಜ್ಯಶಕಟವನ್ನು ನಿರ್ಬಾಧವಾಗಿ ಸಾಗಿಸಿದ್ದನು. ಇವನೂ ಮಹಾರಾಜ್ಞಿಯಾದ ವಿಜಯಾಂಬಿಕಾದೇವಿಯೂ, ಪ್ರಜಾಜನರಲ್ಲಿ ಅತ್ಯಂತ ಅನುರಾಗವುಳ್ಳವರಿದ್ದದರಿಂದ, ಕನ್ನಡಿಗರಿಗೆ ಆ ಕಾಲವು ಅತ್ಯಂತ ಸೌಖ್ಯಪ್ರದವಾಗಿತ್ತು. ವರ್ಧಮಾನ ವಿಜಯಶಾಲಿಯಾದ ಪುಲಿಕೇಶಿ ಮಹಾರಾಜನಿಂದ ಕನ್ನಡಿಗರ ಕೀರ್ತಿವೈಭವದ ಖ್ಯಾತಿಯು ಜಗತ್ತಿನ ತುಂಬ ಪಸರಿಸಿತ್ತು.

ಪುಲಿಕೇಶಿ ಮಹಾರಾಜನು ಲಾಟ, ಮಾಳವ, ಗುರ್ಜರ, ಮೌರ್ಯ ಮೊದಲಾದ ಅರಸರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡು ವಿಜಯಾನಂದದಿಂದ ವಾತಾಪಿಪುರ ರಾಜಧಾನಿಯನ್ನು ಸೇರತಕ್ಕವನಿದ್ದನು. ಅಷ್ಟರಲ್ಲಿ ಕಂಚಿಯ-ಪಲ್ಲವ ಅರಸನಾದ ಮೊದ

ಲನೆಯು ಮಹೇಂದ್ರವರ್ಮನು ಸ್ವತಂತ್ರನಾಗಲಿಕ್ಕೆ ಪ್ರಯತ್ನಿಸತೊಡಗಿರುವನೆಂದೂ, ಅವನು ತನ್ನ ಸಾಮ್ರಾಜ್ಯದಲ್ಲಿ ಬಂಡಾಯವೆಬ್ಬಿಸುವದಕ್ಕೆ ಸಿದ್ಧನಾಗಿರುವನೆಂದೂ ಪುಲಿಕೇಶಿಗೆ ತಿಳಿಯಿತು. ಕೂಡಲೆ ತನ್ನ ಮಾರ್ಬಲವನ್ನು ತೆಗೆದುಕೊಂಡು ಅವನು ಕಂಚಿಯ ಮಹೇಂದ್ರವರ್ಮನನ್ನು ದಂಡಿಸುವದಕ್ಕಾಗಿ ತೆರಳಿದನು.

ಪುಲಿಕೇಶಿಯು ಸಸೈನ್ಯವಾಗಿ ಕಂಚಿಯನ್ನು ಸಮೀಪಿಸಿದ ಕೂಡಲೆ ಮಹೇಂದ್ರವರ್ಮನು ಧೃತಿಗುಂದಿದನು. ಕನ್ನಡಕಲಿಯ ಅಮೋಘವಾದ ಸೈನ್ಯದ ಮುಂದೆ ತನ್ನ ಸೈನ್ಯವು ಗೊತ್ತಿಗೆ ಮುಟ್ಟುವದಿಲ್ಲೆಂದು ಅವನು ತಿಳಿದುಕೊಂಡನು. ಒಪ್ಪಂದದ ಹೊರತು ಗತ್ಯಂತರವಿಲ್ಲೆಂದು ಬಗೆದು, ಅವನು ತನ್ನ ರಾಯಭಾರಿಯನ್ನು ಪುಲಿಕೇಶಿಯ ಕಡೆಗೆ ಕಳುಹಿದನು. ಮಹೇಂದ್ರವರ್ಮನು ಅತ್ಯಂತ ದೀನನಾಗಿ ವಿನಂತಿ ಮಾಡಿಕೊಂಡದ್ದರಿಂದ, ದಯಾರ್ದ್ರಹೃದಯಿಯಾದ ಪುಲಿಕೇಶಿಯು ಒಡಂಬಡಿಕೆಗೆ ಸಿದ್ಧನಾದನು.

ಮಹೇಂದ್ರವರ್ಮನು ಪುಲಿಕೇಶಿಯನ್ನು ಸನ್ಮಾನಿಸಿ, ತನ್ನ ಓಲಗಕ್ಕೆ ಕರೆಯಿಸಿಕೊಂಡನು. ಅವನು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಪುಲಿಕೇಶಿಗೆ ವಿನಯದಿಂದ ಪ್ರಾರ್ಥಿಸಿದನು. ಅವನ ವಿನಂತಿಯನ್ನು ಮನ್ನಿಸಿ, ಪುಲಿಕೇಶಿಯು:—

"ಮಹೇಂದ್ರವರ್ಮರೆ, ನೀವು ನಿಷ್ಕಾರಣವಾಗಿ ಕರ್ನಾಟಕ ಸಾಮ್ರಾಜ್ಯದ ವಿಷಯದಲ್ಲಿ ದ್ವೇಷಾಸೂಯೆಗಳನ್ನು ತಳೆದಿರುವಿರಿ. ಕೀರ್ತಿವರ್ಮ ಮಹಾರಾಜರು ಎಲ್ಲಿಯವರೆಗೆ ತಮ್ಮ ಆಧಿಪತ್ಯವನ್ನು ನೆಲೆಗೊಳಿಸಿದ್ದರೋ, ಅಲ್ಲಿಯ ವರೆಗೆ ಮಾತ್ರ, ನಾನು ನನ್ನ ವರ್ಚಸ್ವವನ್ನು ನೆಲೆಗೊಳಿಸತಕ್ಕವನೇ. ಮಂಗಳೇಶರವರ ಆಧಿಪತ್ಯದಲ್ಲಿ ಎಷ್ಟೋ ಅರಸರು ಸ್ವತಂತ್ರರಾಗಿ ಮನಬಂದಂತೆ ನಡೆಯತೊಡಗಿದರು. ಅವರನ್ನು ಕೈವಶದಲ್ಲಿ ತೆಗೆದುಕೊಳ್ಳುವ ಉದ್ದೇಶದಿಂದಲೇ ನಾನು ದಂಡಯಾತ್ರೆಗಾಗಿ ಹೊರಟಿರುವೆನು. ಕನ್ಯಾಕುಮಾರಿಯಿಂದ ನರ್ಮದೆಯ ವರೆಗಿನ ದೇಶವು ಕರ್ನಾಟಕ ಸಾಮ್ರಾಜ್ಯವೆನಿಸಿಕೊಳ್ಳ

ವದು. ಈ ದಕ್ಷಿಣ ದೇಶದೊಳಗಿನ ಎಲ್ಲ ಮಂಡಲೇಶ್ವರರು ಕರ್ನಾಟಕ ಸಾಮ್ರಾಜ್ಯದ ಸಿಂಹಾಸನದಲ್ಲಿ ನಿಷ್ಠೆಯುಳ್ಳವರಾಗಿರತಕ್ಕದ್ದು; ವೇಳೆ-ವೇಳೆಗೆ ಕಪ್ಪ-ಕಾಣಿಕೆಗಳನ್ನು ಅರ್ಪಿಸತಕ್ಕದ್ದು. ಈ ನಿಯಮಕ್ಕೆ ಯಾರಾದರೂ ವಿರೋಧಿಗಳಾಗಿ ನಡೆದರೆ, ಕ್ಷಮೆಯು ಎಂದೂ ದೊರೆಯಲಿಕ್ಕಿಲ್ಲ. ನಿಮ್ಮ ಬಳಿಯಲ್ಲಾದರೂ ನಾನು ವಿನಂತಿಮಾಡಿಕೊಳ್ಳುವದೇನಂದರೆ, ಕಂಚಿಯು ವಾತಾಪಿಪುರದ ಮಾಂಡಲಿಕ ಅರಸುಮನೆತನವಿರುವದರಿಂದ, ಆಜೀವವೂ ಸ್ನೇಹಸಂಬಂಧವನ್ನು ಕಾಯ್ದುಕೊಳ್ಳತಕ್ಕದ್ದು; ಕಾಣಿಕೆಯನ್ನು ಅವಧಿಗೆ ತಪ್ಪದೆ ಸರಿಯಾಗಿ ತಲುಪಿಸಬೇಕು ನೀವು ಪರಾಭೂತರಾಗಿರುವಿರೆಂದು ನಿಮ್ಮ ರಾಜ್ಯವನ್ನು ಹಸ್ತಗತ ಮಾಡಿಕೊಳ್ಳಬೇಕೆಂಬ ಇಚ್ಛೆಯು ನನ್ನದಿಲ್ಲ. ನಿಮ್ಮ ಕೈಯಿಂದ ಕಂಚಿಯರಾಜ್ಯವನ್ನು ಕಸಿದುಕೊಂಡರೂ ಮತ್ತೊಬ್ಬ ಮಂಡಲೇಶ್ವರನನ್ನು ನಿಯಮಿಸಬೇಕಷ್ಟೇ! ನೀವೇ ವಾತಾಪಿಪುರ ಸಿಂಹಾಸನದಲ್ಲಿ ನಿಷ್ಠೆಯಿಂದ ನಡೆಯುವ ಬಗ್ಗೆ ವಚನವಿತ್ತರೆ, ನಿಮ್ಮ ಅರಸೊತ್ತಿಗೆಯು ನಿಮ್ಮ ಕಡೆಗೇ ಉಳಿಯುವದು "

ದಯಾಮಯನಾದ ಪುಲಿಕೇಶಿಯು ಹೀಗೆ ನುಡಿದದ್ದರಿಂದ, ಶಿಬಿರದ ಜನರಿಗೆ ಪರಮಾನಂದವಾಯಿತು. ಮಹೇಂದ್ರವರ್ಮನಂತೂ ಈ ಕನ್ನಡಸಾರ್ವಭೌಮನ ಘನತರವಾದ ಔದಾರ್ಯವನ್ನು ಬಹು ವಿಧವಾಗಿ ಕೊಂಡಾಡಿದನು. ಅವನು ಹೀಗೆ ದೊಡ್ಡಸ್ತಿಕೆಯನ್ನು ತೋರಿಸಿದ್ದು ವಾತಾಪಿಪುರದ ಸೇನಾಪತಿಯಾದ ಪ್ರತಾಪವರ್ಮನಿಗೆ ಸರಿಯಾಗಿ ಕಾಣಲಿಲ್ಲ. ಪಲ್ಲವರಾಜರು ಮೇಲಿಂದ ಮೇಲೆ ಚಾಲುಕ್ಯರಿಗೆ ಉಪದ್ರವ ಕೊಟ್ಟದ್ದರಿಂದ, ಅವರಿಗೆ ದಯದೋರಬಾರದೆಂದು ಪ್ರತಾಪವರ್ಮನ ಅಭಿಪ್ರಾಯವಿತ್ತು. ದಕ್ಷಿಣದ ರಾಜರಲ್ಲಿ ಕಂಚಿಯ-ಪಲ್ಲವ ರಾಜರು ಬಲಿಷ್ಠರೂ, ಪರೋತ್ಕರ್ಷವನ್ನು ಸಹಿಸದಂಥ ಮನಸ್ಸಿನವರೂ, ದುರಭಿಮಾನಿಗಳೂ ಆದ್ದರಿಂದ, ಅವರಿಗೆ ಯೋಗ್ಯ ಶಾಸನವನ್ನು ವಿಧಿಸಬೇಕೆಂದು ಇವನು ಪುಲಿಕೇಶಿಗೆ ಎಷ್ಟೋ ಬಾರಿ ಹೇಳಿದ್ದನು. ಮಹೇಂದ್ರವರ್ಮನು ಈಗ

ಕ್ಷಮಾಯಾಚನೆಯನ್ನು ಮಾಡುತ್ತಿದ್ದರೂ ಪ್ರಸಂಗವೊದಗಿದರೆ ಮತ್ತೆ ತಿರುಗಿ ಬೀಳುವದಕ್ಕೆ ಹಿಂದೆ-ಮುಂದೆ ನೋಡುವಂತಹನಿಲ್ಲವೆಂಬದನ್ನು ಅವನು ಮನಗಂಡಿದ್ದನು. ಈ ಪ್ರಸಂಗದಲ್ಲಿ ಪುಲಿಕೇಶಿಯನ್ನು ಎಚ್ಚರಗೊಳಿಸುವದೇ ಲೇಸೆಂದು ಭಾವಿಸಿಕೊಂಡು ಅವನು:—

"ಮಹಾರಾಜರೆ, ಈ ಪ್ರಸಂಗದಲ್ಲಿ ನಡುವೆ ಬಾಯಿ ಹಾಕಿದ್ದಕ್ಕೆ ಕ್ಷಮಿಸಿರಿ, ಮಹೇಂದ್ರವರ್ಮರು ಹೊತ್ತು ಬಂದಂತೆ ಕೊಡೆ ಹಿಡಿಯುವವರಿರುವರೆಂಬದನ್ನು ನಾವು ಮರೆಯತಕ್ಕದ್ದಲ್ಲ. ಪಲ್ಲವರು ಬಲಿಷ್ಠರಿರುವದರಿಂದ, ಅವರಿಗೆ ಕ್ಷಮಾದಾನ ಮಾಡಿದರೆ ಅವರಿಂದ ಚಾಲುಕ್ಯರಾಜ್ಯಕ್ಕೆ ಕೇಡಾಗದಿರದೆಂದು ನನ್ನ ಮನೋದೇವತೆಯು ಹೇಳುತ್ತಿರುವದು. ಎಂದಾದರೊಮ್ಮೆ ಕರ್ನಾಟಕ ಸಾಮ್ರಾಜ್ಯಕ್ಕೆ ಕೇಡುಂಟಾಗುತ್ತಿದ್ದರೆ ಈ ಪಲ್ಲವರಾಜರಿಂದಲೇ ಎಂದು ನಿರಾತಂಕವಾಗಿ ಹೇಳಬಹುದು. ಮಹೇಂದ್ರವರ್ಮರ ಹಾಗು ಯುವರಾಜ ನರಸಿಂಹವರ್ಮರ ಸ್ವಭಾವವನ್ನು ನಾನು ಪೂರಾ ಅರಿತಿರುವೆನು. ಆದ್ದರಿಂದಲೇ ಇವರ ಅಪರಾಧವನ್ನು ಕ್ಷಮಿಸಬಾರದೆಂದು ವಿಜ್ಞಾಪಿಸಿಕೊಳ್ಳುವೆನು."

ಪ್ರತಾಪವರ್ಮನ ಈ ಮಾತುಗಳನ್ನು ಕೇಳಿ ಮಹೇಂದ್ರವರ್ಮನು ಭಯಗೊಂಡನು. ಸೇನಾಪತಿಯ ಮಾತುಗಳನ್ನು ನಂಬಿ ಪುಲಿಕೇಶಿಯು ತನ್ನ ರಾಜ್ಯವನ್ನೆಲ್ಲಿ ಕಿತ್ತುಕೊಳ್ಳುವನೋ, ಎಂದು ಅವನು ಚಡಪಡಿಸತೊಡಗಿದನು. ಆಗ ಅವನು ದೀನವಾಣಿಯಿಂದ ಪ್ರತಾಪವರ್ಮನನ್ನು ಕುರಿತು:—

"ಸೇನಾಪತಿಗಳೇ, ಚಾಲುಕ್ಯ ಸಮ್ರಾಟರ ವಿಷಯದಲ್ಲಿ ನನ್ನಲ್ಲೀಗ ಅತ್ಯಂತ ಪ್ರೇಮವು ಹುಟ್ಟಿರುವದು. ಕರ್ನಾಟಕ ಸಿಂಹಾಸನದಲ್ಲಿ ನಿಷ್ಠೆಯಿಂದ ನಡೆಯಬೇಕೆಂದು ನಾನು ಸತ್ಯಸಂಕಲ್ಪ ಮಾಡಿಕೊಂಡಿರುವೆನು. ಸ್ವಲ್ಪ ದಿನಗಳಲ್ಲಿ ನನ್ನ ಸ್ವಭಾವದ ಪರಿಚಯವು ನಿಮಗಾಗಬಹುದು. ನನ್ನ ರಾಜಪದವನ್ನು ನಾಶಗೊಳಿಸಿ ಬೀದಿಯ ಭಿಕ್ಷುಕನಂತೆ ಮಾಡಬೇಕೆನ್ನುವದು ಘನತರ ಯೋಗ್ಯತೆಯು ಕರ್ನಾ

ಟಕ ಸಮ್ರಾಟರ ಧರ್ಮವೇ ಅಲ್ಲ'' ಎಂದು ನುಡಿದು, ಮಹೇಂದ್ರವರ್ಮನು ಪುಲಿಕೇಶಿಯನ್ನು ಕುರಿತು:— ''ಕಾಯಾ-ವಾಚಾ-ಮನಸ್ಸಿನಿಂದ ನಾನು ನಿಮ್ಮೊಡನೆ ಸ್ನೇಹದಿಂದಲೂ, ನಿಷ್ಠೆಯಿಂದಲೂ ವರ್ತಿಸುವೆನು. ಪರಾಭೂತನಾಗಿರುವೆನೆಂದು ನನ್ನನ್ನು ಪಾತಾಳಕ್ಕೆ ತುಳಿಯಬಾರದೆಂದು ಪ್ರಾರ್ಥಿಸುವೆನು''

''ಮಹೇಂದ್ರವರ್ಮನೇ, ಪರಾಭೂತರಾದವರೆಂದು ನಿಮ್ಮ ಮೇಲೆ ಅತ್ಯಾಚಾರ ಮಾಡಬೇಕೆಂದು ನನ್ನ ಮನೀಷೆಯಿರುವದಿಲ್ಲ. ಪ್ರತಾಪಶಾಲಿಗಳ ರಣಖಚಿತಿಯು ಗ್ರಾಹ್ಯವಾದದ್ದಾಗಿದ್ದರೂ, ನಿಮ್ಮ ಮಾತಿನ ಮೇಲೆ ನಿಮ್ಮ ದರ್ಶನದ ಮೇಲೆ ವಿಶ್ವಾಸವಿಟ್ಟು ನಿಮ್ಮ ರಾಜ್ಯವನ್ನು ನಿಮಗೆ ಬಿಟ್ಟು ಕೊಡುವೆನು. ಚಾಲುಕ್ಯರ ಸ್ನೇಹ ಸಂಬಂಧವು ಕಡಿಯದೆ ಹಿಂದಿನಂತೆ ನಡೆಯಬೇಕೆಂದು ನಾನು ನಿಮಗೆ ಸೂಚಿಸದಿರಲಾರೆನು. ನಮ್ಮ ತಂದೆಯವರಾದ ಕೀರ್ತಿವರ್ಮರು ಎಲ್ಲಿಯವರೆಗೆ ತಮ್ಮ ದಿಗ್ವಿಜಯವನ್ನು ಪ್ರಸ್ಥಾಪಿಸಿದ್ದರೋ, ಅಷ್ಟು ಪ್ರದೇಶಗಳು ಮಾತ್ರ ಕರ್ನಾಟಕ ಸಾಮ್ರಾಜ್ಯಛತ್ರದ ಕೆಳಗೆ ಇರತಕ್ಕದ್ದೆಂದು ನನ್ನ ಮಹತ್ವಾಕಾಂಕ್ಷೆಯಿರುವದು. ಇಷ್ಟಕ್ಕಿಂತ ಹೆಚ್ಚಿನ ಆಶೆಯು ನನಗಿಲ್ಲ. ನೀವು ಚಿರಂತನವಾಗಿ ಚಾಲುಕ್ಯಮಂಡಲೇಶ್ವರರಾಗಿ ಬಾಳಬೇಕೆಂದು. ನೀವು ಈ ಮಾತಿಗೆ ಒಪ್ಪುತ್ತಿದ್ದರೆ ಒಡಂಬಡಿಕೆಯ ಪತ್ರವನ್ನು ಬರೆಯಿರಿ.''

ಪುಲಿಕೇಶಿಯ ಈ ಸೂಚನೆಗೆ ಮಹೇಂದ್ರವರ್ಮನು ಒಪ್ಪಿಕೊಂಡು ಕರಣಿಕನಿಂದ ಒಪ್ಪಂದದ ಪತ್ರಿಕೆಯನ್ನು ಬರೆಯಿಸಿ, ರಾಜಮುದ್ರೆಯನ್ನು ಹಾಕಿ ಅವನ ಸ್ವಾಧೀನದಲ್ಲಿ ಕೊಟ್ಟನು. ಅಷ್ಟರಲ್ಲಿ ಪ್ರತಿಹಾರಿಯು ಪುಲಿಕೇಶಿಗೂ ಮಹೇಂದ್ರವರ್ಮನಿಗೂ ವಂದಿಸಿ:—

''ಕರ್ನಾಟಕದಿಂದ ಚಾರನು ಬಂದಿರುವನು; ಅಪ್ಪಣೆಯಾದರೆ ಕರೆತರುವೆನು.''

'ವಾತಾಪಿಪುರದಿಂದ ದೂತನು ಬಂದಿರುವನೆ?' ಎಂದು ಉತ್ಕಂಠೆಯಿಂದ ಪುಲಿಕೇಶಿಯು ಅವನನ್ನು ಕೇಳಿದನು. ಆಗ ಪ್ರತಿಹಾರಿಯು:

"ಹೌದು ಅವನು ರಾಜಧಾನಿಯಿಂದ ಬಂದಿರುವನಂತೆ. ಅಮಾತ್ಯರಾದ ವೀರಸೇನರು ವಿಜ್ಞಾಪನಾಪತ್ರಿಕೆಯನ್ನು ಮಹಾಪ್ರಭುಗಳ ಸನ್ನಿಧಿಗೆ ಕಳಿಸಿರುವರಂತೆ."

"ಅವನನ್ನು ಬೇಗನೆ ಕರೆದುಕೊಂಡು ಬಾ."

ಪುಲಿಕೇಶಿಯು ಆಜ್ಞೆಯನ್ನು ಕೊಡಲು ಪ್ರತೀಹಾರಿಯು ವಾತಾಪಿ ಪುರದ ಚಾರನನ್ನು ಒಳಗೆ ಕರೆತಂದನು. [illegible] ಚಾರನು ಬಾಗಿ ಮೂರು ಮೂರು ಸಾರೆ ನೆಲಮುಟ್ಟಿ ಪ್ರ[illegible]ಗೆ ಸಮರ್ಪಿಸಿ, ತನ್ನಲ್ಲಿರುವ ಪತ್ರಿಕೆಯನ್ನು ಅವನ ಸನ್ನಿಧಿಗೆ ಒಪ್ಪಿಸಿದನು. ಪುಲಿಕೇಶಿಯು ಪತ್ರಿಕೆಯ ಚೀಲವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಒಡೆದನು. ಆ ಚೀಲದಲ್ಲಿ ಎರಡು ಪತ್ರಗಳಿದ್ದುವು. ಒಂದು ಪತ್ರವು ಉತ್ತರಾಪಥದ ಸಾರ್ವಭೌಮನಾದ ಶ್ರೀ ಹರ್ಷವರ್ಧನನದು; ಮತ್ತೊಂದು ಪತ್ರವು ವೀರಸೇನನದು. ಕನ್ಯಾಕುಬ್ಜದ ಸಾರ್ವಭೌಮರಾದ ಹರ್ಷವರ್ಧನರು ಶಿಷ್ಟಿಗಾಗಿ ತಮ್ಮ ಪ್ರತಿನಿಧಿಗಳಾದ ಸ್ಕಂದಗುಪ್ತರನ್ನು ಕಳುಹಿಸಿದ್ದಾರೆ; ಅವರ ಪತ್ರವನ್ನು ಜೊತೆಗೆ ಕಳಿಸಿರುವೆನೆಂದೂ ವೀರಸೇನನು ತನ್ನ ಪತ್ರದಲ್ಲಿ ಬರೆದಿದ್ದನು. ಅವನ ಪತ್ರವನ್ನೋದಿದ ಮೇಲೆ ಪುಲಿಕೇಶಿಯು ಹರ್ಷವರ್ಧನನ ಪತ್ರವನ್ನು ಓದಲಾರಂಭಿಸಿದನು:—

ಸಾರ್ವಭೌಮ ಪುಲಿಕೇಶಿ ಮಹಾರಾಜ ವಾತಾಪಿಪುರ,
ಇವರಿಗೆ: —

ಶ್ರೀ ಹರ್ಷವರ್ಧನ ಸಮ್ರಾಟ್ ಉತ್ತರಾಪಥ ರಾಜಧಾನಿ ಕನ್ಯಕುಬ್ಜ ಇವರ ಸಂದೇಶವೇನೆಂದರೆ —

ನೀವು ದಿಗ್ವಿಜಯ ಯಾತ್ರೆಗಾಗಿ ಹೊರಟು ನಮ್ಮ ಮಂಡಲೇಶ್ವರರಾದ ಮಾಳವ, ಗುರ್ಜರ, ಕೋಶಲ, ಲಾಟ ಮೊದಲಾದ ರಾಜರನ್ನು ಪರಾಭವಗೊಳಿಸಿ ಒತ್ತಾಯ ಪಡಿಸಿ ಅವರಿಂದ ಕಾಣಿಕೆಯನ್ನು ತೆಗೆದುಕೊಂಡ ಸಂಗತಿಯು ನಮಗೆ ತಿಳಿಯಿತು. ನಿಮ್ಮ ಈ ಕೃತಿಯು ತೀರ ಅಕ್ಷಮ್ಯವಾದದ್ದಾಗಿರುವದು. ಈ ವಿಷಯದಲ್ಲಿ ನಿಮ್ಮ

ನ್ನು ಚನ್ನಾಗಿ ಜಾಗ್ರತೆಗೊಳಿಸಬೇಕೆಂಬ ಉದ್ದೇಶದಿಂದ ನಮ್ಮ ಹಸ್ತಿ ಸೇನಾಪತಿಗಳಾದ ಸ್ಕಂದಗುಪ್ತರನ್ನು ನಿಮ್ಮಲ್ಲಿಗೆ ಶಿಷ್ಟಾಯಿ-ಗಾಗಿ ಪ್ರತಿನಿಧಿಗಳೆಂದು ಕಳುಹಿಸಿರುವೆನು.

ಮಂಗಳೇಶ ಮಹಾರಾಜರ ಆಳಿಕೆಯಲ್ಲಿ ಕರ್ನಾಟಕ ಸಾಮ್ರಾಜ್ಯವು ತೀರ ನಿಕೃಷ್ಟಾವಸ್ಥೆಯನ್ನು ಹೊಂದಿತ್ತು. ಅದು ವಿಕ್ರಮ ಶಾಲಿಗಳಾದ ನಿಮ್ಮಿಂದ ಸುಸ್ಥಿತಿಯನ್ನು ಹೊಂದತೊಡಗಿದ್ದನ್ನು ನೋಡಿ ನನಗೆ ಆನಂದವೆನಿಸತೊಡಗಿದೆ; ಆದರೆ ನಿಮ್ಮ ರಾಜ್ಯಲೋಭದ ಕಾರ್ಯಕ್ಷೇತ್ರವು ಇತ್ತೀಚೆಗೆ ಮೇರೆದಪ್ಪತೊಡಗಿದ್ದರಿಂದ, ಈ ಸಂಧಿಯಲ್ಲಿ ನಿಮ್ಮನ್ನು ಎಚ್ಚರಗೊಳಿಸುವ ಪ್ರಸಂಗವೊದಗಿತು. ನರ್ಮದೆಯ ವರೆಗಿನ ಪ್ರದೇಶವೆಲ್ಲ ಕರ್ನಾಟಕ ಸಾಮ್ರಾಜ್ಯಕ್ಕೊಳಗಾಗಬೇಕೆಂದು ನಿಮ್ಮ ದುರಾಕಾಂಕ್ಷೆಯಿದ್ದಂತೆ ತೋರುತ್ತದೆ. ಕೀರ್ತಿವರ್ಮರ ಕಾಲದಲ್ಲಿ ಎಷ್ಟು ರಾಜ್ಯವು ದಕ್ಷಿಣಾಪಥದ ಸಾಮ್ರಾಜ್ಯಕ್ಕೊಳಗಾಗಿತ್ತೋ, ಅಷ್ಟು ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ನಿಮ್ಮ ನಿಶ್ಚಯವಿರುವದೆಂಬದನ್ನಾದರೂ ನಾನು ಕೇಳಿರುವೆನು ಸಧ್ಯದ ಕಾಲದಲ್ಲಿ ಹೆಚ್ಚಿನ ರಾಜ್ಯತೃಷ್ಣೆಗೊಳಗಾಗ ಬಾರದೆಂಬ ಉದ್ದೇಶದಿಂದ ನಾನು ನಿಮಗೆ ಸಂದೇಶ ಕಳುಹಿಸಿರುವೆನು. ವಸ್ತುಸ್ಥಿತಿಯನ್ನು ನಿವೇದಿಸಿ, ನಿಮ್ಮಲ್ಲಿ ಹುಟ್ಟಿದ್ದ ಅನ್ಯಾಕ್ರಾಂತಬುದ್ಧಿಯನ್ನು ನಷ್ಟಪಡಿಸಬೇಕೆಂದು ನನ್ನ ಇಚ್ಛೆಯಿರುವದು.

ನಾನು ನಿಮಗೆ ಸ್ಪಷ್ಟವಾಗಿ ತಿಳಿಸುವದೇನಂದರೆ, ಗೋದಾವರಿನದಿಯ ಉತ್ತರದಲ್ಲಿ ನಿಮ್ಮ ಹೆಜ್ಜೆಯು ಬೀಳಕೂಡದು; ದಕ್ಷಿಣ ಪ್ರದೇಶದಲ್ಲಿ ನಾವು ಪ್ರವೇಶಿಸುವದಿಲ್ಲ ಉತ್ತರಾಪಥಕ್ಕೆ ನಾವು ಹೇಗೋ, ಅದರಂತೆ ದಕ್ಷಿಣಾಪಥಕ್ಕೆ ನೀವು ಸಾರ್ವಭೌಮರಿರುವದರಿಂದ, ಬುದ್ಧಿಪೂರ್ವಕವಾಗಿ ಪ್ರತಿನಿಧಿಗಳನ್ನು ಕಳುಹಿಸಿರುವೆನು.

ಅಂಜಿಕೆಯಿಂದಲೇ ಹೀಗೆ ಸಂದೇಶವನ್ನು ಕಳುಹಿಸಿರುವರೆಂದು ನಿಮ್ಮ ಭಾವನೆಯಾಗಬಹುದು. ನಿಷ್ಕಾರಣವಾಗಿ ಯುದ್ಧದ ಗೊಂದಲವೇಳಬಾರದೆಂಬ ಉಚ್ಚತಮವಾದ ಧ್ಯೇಯದಿಂದ ನಿಮಗೆ ಪತ್ರ

ಕಳುಹಿಸಿರುವೆನು. ನನ್ನ ಈ ಸಂದೇಶವನ್ನು ಉತ್ತರಾಪಥದ ಸಂದೇಶವೆಂದು ತಿಳಿಯತಕ್ಕದ್ದು. ಶಿಷ್ಯರಿಗಾಗಿ ಬಂದ ಸ್ಕಂದಗುಪ್ತರು ಎಲ್ಲ ಸಂಗತಿಗಳನ್ನು ತಿಳಿಸುವರು. ಪರಮಾತ್ಮನು ನಿಮಗೆ ಸದ್ಬುದ್ಧಿಯನ್ನು ಕೊಡಲೆಂದು ಹಾರೈಸುವೆನು.

ತಮ್ಮ,

ಶ್ರೀ ಹರ್ಷವರ್ಧನ ಸಾರ್ವಭೌಮ, ಕನ್ಯಾಕುಬ್ಜ

ಪುಲಿಕೇಶಿಯು ಈ ಪತ್ರವನ್ನು ಓದಿ, ಪತ್ರವನ್ನು ಮಡಿಚಿದ ಕೂಡಲೆ ಸಂತಾಪದಿಂದ ಉರಿಯುತ್ತಲಿದ್ದನು. ಉತ್ತರಾಪಥದ ಸಾರ್ವಭೌಮನೇ ಹೆಮ್ಮೆಯಿಂದ ದಂಡಯಾತ್ರೆಗೆ ಸನ್ನದ್ಧನಾಗಿರುವನೆಂದು ಅವನು ತಿಳಿದನು. ಆಗ ಅವನು ಸೇನಾಪತಿವರ್ಗವನ್ನು ಕುರಿತು:—

“ಸೇನಾಪತಿಗಳೆ, ಉತ್ತರಾಪಥದ ಸಂದೇಶವನ್ನು ಕೇಳಿದಿರಾ? ಹರ್ಷವರ್ಧನನು ಪ್ರಮತ್ತನಾಗಿರುವಂತೆ ತೋರುತ್ತದೆ. ರಾಕ್ಷಸೀ ರಾಜ್ಯತೃಷ್ಣೆಯುಳ್ಳವನಾದ ಅವನು ತನ್ನ ಸಾಮ್ರಾಜ್ಯವನ್ನು ಗೋದಾವರಿಯ ವರೆಗೆ ವಿಸ್ತರಿಸಬೇಕೆಂದು ಹೊಂಚು ಹಾಕಿರುವನು. ನಾವು ಈಗಲೆ ವಾತಾಪಿಪುರಕ್ಕೆ ಹೊರಡೋಣ. ಉತ್ತರಾಪಥದ ಪ್ರತಿನಿಧಿಯಾದ ಸ್ಕಂದಗುಪ್ತನಿಗೆ ದಕ್ಷಿಣಾಪಥದ ಸಂದೇಶವನ್ನು ತಿಳಿಸೋಣ. ದಕ್ಷಿಣ ದಿಗ್ವಿಜಯದಲ್ಲಿ ಬೇಸರಗೊಂಡಿದ್ದ ನಮಗೆ ಉತ್ತರ ದಿಗ್ವಿಜಯ ಮಾಡುವ ಅಮೃತಸಂಧಿಯು ಲಭಿಸುವದೆಂದು ಆನಂದವಾಗಿದೆ.”

ಕಂಚಿಯ ಓಲಗವು ವಿಸರ್ಜನೆಯಾಗಿ ಎಲ್ಲರೂ ತಮ್ಮ ತಮ್ಮ ನಿವಾಸಕ್ಕೆ ತೆರಳಿದರು. ಮಹೇಂದ್ರವರ್ಮ ಪಲ್ಲವನು ಪುಲಿಕೇಶಿಗೆ ಚನ್ನಾಗಿ ಆದರಾತಿಥ್ಯ ಮಾಡಿ ಅವನಿಗೆ ಅಂದೇ ನಿರೋಪ ಕೊಟ್ಟನು.

ಪುಲಿಕೇಶಿಯು ತನ್ನ ಪಡೆಯೊಡನೆ ವಾತಾಪಿಪುರದ ಮಾರ್ಗವನ್ನು ಹಿಡಿದು ನಡೆದನು.

—0—

## ಬಂದ ದಾರಿಗೆ ಸುಂಕವಿಲ್ಲ.

ಪುಲಿಕೇಶಿ ಸಾರ್ವಭೌಮನು ಪಲ್ಲವರಾಜನಾದ ಮಹೇಂದ್ರವರ್ಮನ ಅಪರಾಧವನ್ನು ಕ್ಷಮಿಸಿ, ಅವನಿಂದ ಹೇರಳವಾದ ಕಾಣಿಕೆಯನ್ನು ತೆಗೆದುಕೊಂಡು ವಾತಾಪಿಪುರಕ್ಕೆ ಹೊರಟನು. ಕನ್ಯಾಕುಬ್ಜದ ಪ್ರತಿನಿಧಿಯಾದ ಸ್ಕಂದಗುಪ್ತನನ್ನು ಕಂಡು, ಹರ್ಷವರ್ಧನನ ಮನೋಗತವನ್ನು ತಿಳಿದುಕೊಳ್ಳಬೇಕೆಂದು ಅವನು ಆತುರಗೊಂಡಿದ್ದರಿಂದ, ಅವಿಶ್ರಾಂತ ಮಾರ್ಗಕ್ರಮಣ ಮಾಡುತ್ತ ರಾಜಧಾನಿಗೆ ಬಂದನು.

ವೀರಸೇನನು ಪುಲಿಕೇಶಿಯನ್ನು ಕಂಡು ಸ್ಕಂದಗುಪ್ತನ ಆಗಮನದ ಸಂಗತಿಯನ್ನೂ, ಹರ್ಷವರ್ಧನನ ಇಂಗಿತವನ್ನೂ ಅವನಿಗೆ ವಿಶದವಾಗಿ ತಿಳಿಸಿದನು. ಸ್ಕಂದಗುಪ್ತನೊಡನೆ ಏನು ಸಂದೇಶವನ್ನು ಕಳಿಸಬೇಕೆಂಬುದರ ಬಗ್ಗೆ ರಾಜಪರಿವಾರದಲ್ಲಿ ಚರ್ಚೆಯು ಪ್ರಾರಂಭವಾಯಿತು. ಅಂದಿನ ದಿವಸದ ಓಲಗದಲ್ಲಿ ಬಹಳ ಜನರು ಕೂಡಿದ್ದರು. ಗಂಗರಸನಾದ ರವಿದತ್ತನೂ, ಸೇಂದ್ರಕರಾಜನಾದ ದುರ್ಗಶಕ್ತಿಯೂ, ಆಳುಪ ರಾಜನಾದ ಗುಣಸಾಗರನೂ ಅಲ್ಲಿಗೆ ಆಗಮಿಸಿದ್ದರು. ಪುಲಿಕೇಶಿಯು ತನ್ನ ಬಂಧುಗಳಾದ ವಿಷ್ಣುವರ್ಧನ-ಜಯಸಿಂಹರನ್ನು ಮಂತ್ರಾಲೋಚನೆಗಾಗಿ ಕರೆಯಿಸಿದ್ದನು. ಹರ್ಷವರ್ಧನನ ಬೆದರಿಕೆಗೆ ಸೊಪ್ಪುಹಾಕತಕ್ಕದ್ದಲ್ಲವೆಂದೂ, ಶಕ್ತಿಮೀರಿ ಯತ್ನಿಸಿ ದಕ್ಷಿಣಾಪಥದ ಮಾನವನ್ನೂ ಕೀರ್ತಿಯನ್ನೂ ರಕ್ಷಿಸುವದಕ್ಕೆ ಹೆಣಗಬೇಕೆಂದೂ ಅಂದಿನ ಸಭೆಯಲ್ಲಿ ನಿರ್ಧರಿಸಲ್ಪಟ್ಟಿತು. ಸ್ಕಂದಗುಪ್ತನನ್ನು ಓಲಗಕ್ಕೆ ಕರೆಯಿಸಿ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಬೇಕೆಂದು ಪುಲಿಕೇಶಿಯು ನಿಶ್ಚಯಿಸಿಕೊಂಡನು.

ಪುಲಿಕೇಶಿಯು ಓಲಗದಲ್ಲಿ ಕುಳಿತಿದ್ದನು. ಮಂತ್ರಿ-ಸೇನಾಪತಿಗಳಾದ ವೀರಸೇನ-ಪ್ರತಾಪವರ್ಮರೂ, ಮಂಡಲೇಶ್ವರರಾದ ದುರ್ಗಶಕ್ತಿ, ರವಿದತ್ತ, ಗುಣಸಾಗರ ಮೊದಲಾದವರೂ ಯೋಗ್ಯಾಸನದಲ್ಲಿ ಮಂಡಿಸಿದ್ದರು. ಕುಬ್ಜ ವಿಷ್ಣುವರ್ಧನ-ಜಯಸಿಂಹರೂ

ಮಹಾರಾಜನ ಪಾರ್ಶ್ವದಲ್ಲಿಯ ಆಸನಗಳಲ್ಲಿ ಕುಳಿತಿದ್ದರು. ಉತ್ತರಾಪಥದ ಪ್ರತಿನಿಧಿಯಾದ ಸ್ಕಂದಗುಪ್ತನು ಸಿಂಹಾಸನದ ಎದುರಿಗಿದ್ದ ಸುವರ್ಣಖಚಿತವಾದ ಗದ್ದುಗೆಯ ಮೇಲೆ ಕುಳಿತಿದ್ದನು. ಅಂದಿನ ಓಲಗದಲ್ಲಿ ಜನ ಸಮುದಾಯವು ಬಹಳವಾಗಿ ಕೂಡಿತ್ತು. ತಮ್ಮ ಮಹಾರಾಜನು ಸ್ಕಂದಗುಪ್ತನಿಗೆ ಏನು ಸಂದೇಶವನ್ನು ಹೇಳುವನೆಂಬದನ್ನು ಕೇಳುವದಕ್ಕಾಗಿ ಎಲ್ಲ ಜನರು ಉತ್ಕಂಠಿತರಾಗಿದ್ದರು.

ಸ್ಕಂದಗುಪ್ತನು ಅನ್ವಯಾಂಬಿದ ಗಜಸೇನಾಪತಿಯಾಗಿದ್ದನು. ಇವನು ಬಹಳ ಚಾಣಾಕ್ಷನೂ ರಾಜಕಾರಣಪಟುವೂ ಇದ್ದನು. ಇವನು ಅತ್ಯಂತ ವರ್ಚಸ್ವಿಯಾಗಿದ್ದು, ಪೊಳ್ಳು ಬೆದರಿಕೆಯಿಂದ ಜನರನ್ನು ಅಂಜಿಸಿಕೊಳ್ಳುವ ಗುಣವು ಇವನಲ್ಲಿತ್ತು. ಇವನ ವಾಕ್ಚಾತುರ್ಯವು ಅಸಮಾನವಾಗಿತ್ತು. ಯಾವದೊಂದು ಹಂಚಿಕೆಯಿಂದ ಪುಲಿಕೇಶಿಯನ್ನು ಅಂಜಿಸಿ, ಕಾರ್ಯಸಾಧನೆ ಮಾಡಿಕೊಳ್ಳುವೆನೆಂದು ಇವನು ಧೈರ್ಯಗೊಂಡಿದ್ದನು. ಇವನು ವಿಲಕ್ಷಣ ಬುದ್ಧಿಚಾತುರ್ಯದವನಿದ್ದುದರಿಂದಲೇ ಹರ್ಷವರ್ಧನನು ಶಿಷ್ಟಾಯಿಗಾಗಿ ಇವನನ್ನು ದಕ್ಷಿಣಾಪಥಕ್ಕೆ ಕಳುಹಿಸಿದ್ದನು.

ಕೆಲವು ವೇಳೆಯ ವರೆಗೆ ಓಲಗವು ಸ್ತಬ್ಧವಾಗಿತ್ತು. ಯಾರ ಬಾಯಿಂದ ಏನು ಹೊರಡುವದೆಂಬದನ್ನು ಕೇಳುವದಕ್ಕಾಗಿ ಸಭಿಕರು ಆತುರಗೊಂಡಿದ್ದರು. ಆಗ ಸ್ಕಂದಗುಪ್ತನು ಪುಲಿಕೇಶಿಯನ್ನು ಕುರಿತು:—

"ಸಮ್ರಾಟರೆ, ನಾನು ಯಾವ ಕಾರಣದಿಂದ ಇಲ್ಲಿಗೆ ಬಂದಿರುವೆನೆಂಬದು ಶ್ರೀ ಹರ್ಷವರ್ಧನ ಸಾರ್ವಭೌಮರ ಪತ್ರಿಕೆಯಿಂದಲೇ ನಿಮಗೆ ಗೊತ್ತಾಗಿರುವದು. ನಾನು ಸಾಮಾನ್ಯ ಪ್ರತಿನಿಧಿಯಂತೆ ಕೇವಲ ನಿಮ್ಮ ಅಭಿಪ್ರಾಯವನ್ನು ಕೇಳಿಕೊಂಡು ಹೋಗುವದಕ್ಕಾಗಿ ಮಾತ್ರ ಬಂದಿರುವದಿಲ್ಲ. ಈರ್ವರು ಸಾರ್ವಭೌಮರಿಗೂ ಹಿತಕರವಾಗುವಂಥ ಮಾರ್ಗವನ್ನು ತೋರಿಸಬೇಕೆಂದು ನನ್ನ ಉದ್ದೇಶವಿರುವದು. ನಮ್ಮ ಸಾರ್ವಭೌಮರು ಶಾಂತಿಪ್ರಿಯರಿರುವರು. ಆದ್ದ

ರಿಂದ ಹುಮ್ಮಲಿ ದಂಡೋಪಾಯುವನ್ನು ಸ್ವೀಕರಿಸದೆ ನನ್ನನ್ನು ಶಿಷ್ಟಾಯಿಗಾಗಿ ಕಳಿಸಿಕೊಟ್ಟಿರುವರು. ಅವರು ಎಷ್ಟು ಶಾಂತಸ್ವಭಾವದವರೋ, ಪ್ರಸಂಗದಲ್ಲಿ ಅಷ್ಟೇ ಕಠೋರ ಸ್ವಭಾವಗಳೂ ಆಗಿರುವರು. ಉತ್ತರಾಪಥವು ಕರ್ನಾಟಕಸಾಮ್ರಾಜ್ಯಕ್ಕಿಂತ ಪ್ರತಿಯೊಂದು ವಿಷಯದಲ್ಲಿ ವಂಷ್ಟವಾದದ್ದೆಂಬುದನ್ನು ಹೇಳಿದರೆ ನೀವು ನನಗೆ ಹೆಮ್ಮೆಗಾರನೆಂದೆನ್ನಬಹುದು. ಶಕ್ತಿಸಂಪನ್ನರಿರುವವೆಂದು ಆಕ್ರಮಿಸಲಾಗುತ್ತಿರುವ ಮಾಡಬೇಕೆಂಬ ಇಚ್ಛೆಯು ನಮಗಿಲ್ಲ. ಅವರವರ ಅಧಿಕಾರಗಳೂ, ಅವರವರ ರಾಜ್ಯವೂ ಅವರಿಗೇ ಉಳಿದು, ಭಾರತವರ್ಷವು ಸುಖ-ಶಾಂತಿಗಳಿಂದ ಬಾಳಬೇಕೆಂದು ನಮ್ಮ ಸಾರ್ವಭೌಮರ ಉದಾತ್ತವಾದ ಉದ್ದೇಶವಿರುವದು. ಅಂತೆಯೇ ಅವರು ಹುಮ್ಮಲಿ ದಂಡೆತ್ತಿ ಇಲ್ಲಿಗೆ ಬಾರದೆ, ಸಂಧಾನಕ್ಕಾಗಿ ನನ್ನನ್ನು ಕಳುಹಿಸಿರುವರು. ಇಷ್ಟರ ಮೇಲಿಂದ ನಮ್ಮ ರಾಜರ ಗುಣದ ಮಹತಿಯು ಚನ್ನಾಗಿ ವ್ಯಕ್ತವಾಗುವದಿಲ್ಲವೇ? ನೀವು ದಕ್ಷಿಣದ ಸಮ್ರಾಟರಿರುವಿರಿ. ನಿಮ್ಮ ಮನಸ್ಸಾದರೂ ಘನತರವಾದದ್ದೆಂಬುದನ್ನು ಕೇಳಿರುವೆನು. ಸತ್ವಶಾಲಿಗಳಾದ ಜನರು ವಿಜಯೋತ್ಸಾಹದ ಭರದಲ್ಲಿ ಅನುಚಿತ ಕೃತ್ಯಗಳನ್ನು ಆಚರಿಸುವದು ಮಾನವೀ ಪ್ರಾಣಿಗಳ ಸ್ವಭಾವಸಿದ್ಧವಾದ ಧರ್ಮವಿರುವದು. ಸದಸದ್ವಿವೇಕ ಬುದ್ಧಿಯುವರಾದ ನೀವು ನಿಮ್ಮ ತಪ್ಪುಗಳನ್ನು ಸುಧಾರಿಸಿಕೊಂಡರೆ ಕ್ಷೇಮವಾಗುವದು.''

ಹೀಗೆ ಸ್ಕಂದಗುಪ್ತನು ನುಡಿದು, ಪುಲಿಕೇಶಿಯು ಮುಖದಿಂದ ಏನು ಹೊರಡುವದೆಂಬದನ್ನು ನಿರೀಕ್ಷಿಸತೊಡಗಿದನು. ಅವನ ಮಾತುಗಳು ಪುಲಿಕೇಶಿಯು ಸಂತಾಪವನ್ನು ಅತಿಶಯವಾಗಿ ಜಾಗ್ರತಗೊಳಿಸಿದ್ದವು; ಆದರೂ ಅವನು ಉಕ್ಕುತ್ತಿದ್ದ ಕ್ರೋಧಾಗ್ನಿಯನ್ನು ಶಾಂತಪಡಿಸಿ, ಸ್ಕಂದಗುಪ್ತನನ್ನು ಕುರಿತು:—

"ಸ್ಕಂದಗುಪ್ತರೆ, ನೀವು ಜ್ಞಾನವೃದ್ಧರೂ, ವಯೋವೃದ್ಧರೂ ಇರುವಿರಿ. ಹರ್ಷವರ್ಧನರು ನಿಮ್ಮ ಸಾರ್ವಭೌಮರಾದ್ದರಿಂದ ಕೇವಲ ಅವರ ಕಡೆಗೆ ದೃಷ್ಟಿಯನ್ನಿಟ್ಟು ಹೀಗೆ ಮಾತಾಡುವಿರೋ, ನಿಮ್ಮ ಈ

ಮಾತುಗಳು ನಿಸ್ಪೃಹನ್ಯತ್ರಿಯವೋ? ಅನ್ಯರ ಎಳ್ಳು ಮೊನೆಯಷ್ಟು ಸ್ಥಳವನ್ನು ಕೂಡ ಈ ಕನ್ನಡ ಸಮ್ರಾಟನು ಬಯಸುವವನಲ್ಲವೆಂಬದನ್ನು ಚನ್ನಾಗಿ ಲಕ್ಷ್ಯದಲ್ಲಿಡಿರಿ. ನನ್ನ ತಂದೆಯವರಾದ ಕೀರ್ತಿವರ್ಮರು ತಮ್ಮ ನೆತ್ತರವನ್ನು ಸಂಗ್ರಾಮದೇವತೆಗೆ ಬಲಿಯೊಪ್ಪಿಸುತ್ತ ಎಲ್ಲಿಯ ವರೆಗೆ ತಮ್ಮ ವರ್ಚಸ್ಸವನ್ನು ಪ್ರಸ್ಥಾಪಿಸಿದ್ದರೋ, ಅಷ್ಟು ಪ್ರದೇಶಗಳನ್ನು ಮಾತ್ರ ನಾನು ನನ್ನ ಅಂಕಿತದಲ್ಲಿಟ್ಟುಕೊಂಡಿರುವೆನು. ಕರ್ನಾಟಕ ಸಾಮ್ರಾಜ್ಯದ ಸೀಮೆಯು ನರ್ಮದೆಯ ವರೆಗಿರುವದು. ಹರ್ಷವರ್ಧನನು ರಾಜ್ಯಲೋಭಕ್ಕೊಳಗಾಗಿ ತಮ್ಮ ಉತ್ತರಾಪಥವನ್ನು ಗೋದಾವರಿಯ ವರೆಗೆ ತಂದು ಮುಟ್ಟಿಸುವ ದೀರ್ಘಪ್ರಯತ್ನದಲ್ಲಿದ್ದಂತೆ ಕಾಣುವದು. ಅವರ ಈ ಪ್ರಯತ್ನಕ್ಕೆ ಯಶವು ದೊರೆಯಲಾರದೆಂದು ದೃಢವಾಗಿ ನಂಬಿರಿ. ನಿಮ್ಮ ಸಾರ್ವಭೌಮರಿಗೆ ಬಾಹುಬಲದ ಗರ್ವವಿದ್ದಂತಿದೆ. ಅಂತೆಯೇ ಅವರು ಶಿಷ್ಟಾಯಿಗಾಗಿ ನಿಮ್ಮನ್ನು ಇಲ್ಲಿಯ ವರೆಗೆ ಕಳುಹಿಸಿರುವರು. ಕರ್ನಾಟಕ ಸಾಮ್ರಾಜ್ಯವು ನರ್ಮದೆಯ ವರೆಗಿರುವದೆಂದು ನಾನು ಹೇಳಿದರೆ, ಅವರು ದಂಡೆತ್ತಿ ಬರಬೇಕೆಂದು ಸಾಹಸ ಮಾಡುವರಲ್ಲವೇ? ಕನ್ನಡವೀರರು ಯಮರಕ್ಕೆ ಅಂಜುವವರಲ್ಲವೆಂದು ಉತ್ತರಾಪಥದವರು ದೃಢವಾಗಿ ನಂಬತಕ್ಕದ್ದು."

"ಮಹಾರಾಜರೆ, ಕೋಪಕ್ಕೆ ಬಿದ್ದು ಅದೂರದೃಷ್ಟಿಯಿಂದ ನಡೆಯಬೇಡಿರಿ. ನಮ್ಮ ಸಾರ್ವಭೌಮರು ಹಿಂದು ಮುಂದಿನ ವಿಚಾರ ಮಾಡದೆ ನಿಮ್ಮಂತೆ ಹುಮ್ಮಸ್ಸಿಲೆ ಧುಮುಕತಕ್ಕವರಲ್ಲ. ಸಂಗ್ರಾಮದ ಬೇಗೆಯನ್ನು ಹಬ್ಬಿಸಿ, ದೇಶದ ಹಾನಿ ಮಾಡಬೇಕೆಂಬ ಉದ್ದೇಶದಿಂದ ನಾನು ಇಲ್ಲಿಯ ವರೆಗೆ ಬಂದಿಲ್ಲ. ಕೀರ್ತಿವರ್ಮರು ಉತ್ತರಾಪಥದ ಮೇಲೆ ದಾಳಿ ಮಾಡಿ ನರ್ಮದೆಯ ವರೆಗಿನ ಪ್ರದೇಶವನ್ನು ಪಾದಾಕ್ರಾಂತ ಮಾಡಿದ್ದರು. ಅವರ ತರುವಾಯ ಗುರ್ಜರ, ಲಾಟ, ಮಾಳವ, ಕೋಸಲ ಮೊದಲಾದ ಅರಸರು ಕನ್ಯಕುಬ್ಜ ಸಾಮ್ರಾಜ್ಯಕ್ಕೆ ಅಂಕಿತರಾದರು. ನೀವು ಕನ್ಯಕುಬ್ಜದ ಸಮ್ರಾಟನನ್ನು ಪರಾ

ಭವಗೊಳಿಸಿದ ಹೊಂತು, ಆ ದೇಶಗಳು ನಿಮ್ಮ ಮಾಂಡಲಿಕತ್ವವನ್ನು ವಹಿಸುವದು ದೂರತೋಪಾಸ್ತಪಿರುವದು. ಸದ್ಯದಲ್ಲಿ ನೀವು ಅವ ರನ್ನು ಜಯಿಸಿ ಕಾಣಿಕೆಯನ್ನು ತಂದಿದ್ದರೂ ಮುಂದೆ ಅವರು ನಮ್ಮ ಅಧಿಪತ್ಯದಲ್ಲಿಯೇ ಸೇರತಕ್ಕವರು. ನಮ್ಮ-ನಿಮ್ಮ ಕಾದಾಟದಲ್ಲಿ ನಿಷ್ಕಾರಣವಾಗಿ ಆ ಮಂಡಲೇಶ್ವರರು ಸಂಕಟಕ್ಕೊಳಗಾಗುವರು. ನೀವು ವಿಚಾರಶೀಲರಿದ್ದರೆ ಯುದ್ಧದ ಪ್ರಸಂಗವನ್ನು ತರಲಾರಿರೆಂದು ನಾನು ತಿಳಿಯುತ್ತೇನೆ. ಹೊಸದನ್ನು ಗಳಿಸ ಹೋಗಿ, ಇದ್ದುದನ್ನು ಕಳೆದುಕೊಂಡು ಕುಳಿತುಕೊಳ್ಳುವದು ದಡ್ಡತನವೆಂಬುದನ್ನು ನಾನು ಹೇಳಬೇಕಾಗಿಲ್ಲ. ವಿಚಾರ ಮಾಡಿ ನೋಡಿರಿ ಗುಪ್ತಸಾರ್ವಭೌ ಮರು ಸಾಮಾನ್ಯರಲ್ಲ. ಅಂತಹ ಸತ್ವಶಾಲಿಗಳೊಡನೆ ಹೋರಾಡು ವದು ಸಾಧಾರಣ ತರದ ಮಾತಲ್ಲವೆಂಬುದನ್ನು ಸ್ಮರಣೆಯಲ್ಲಿಟ್ಟು ವರ್ತಿಸಿರೆಂದರಾಯಿತು."

ಸ್ಕಂದಗುಪ್ತನ ಈ ಮಾತುಗಳನ್ನು ಕೇಳಿ ಪುಲಿಕೇಶಿಗೆ ಅಸಹ್ಯ ವಾದ ಸಂತಾಪವಾಯಿತು. ರಾಜಪರಿವಾರವಂತೂ ಸಿಟ್ಟಿನಿಂದ ಉರಿ ಯತೊಡಗಿತು. ತನ್ನ ಸಾರ್ವಭೌಮನ ಪರಾಕ್ರಮದ ಬಣ್ಣವನ್ನು ಸುರಿಸಿ-ಅಂಜಿಸಿ, ತನ್ನ ಕೆಲಸ ಮಾಡಿಕೊಂಡು ಹೋಗುವದಕ್ಕೆ ಇವನು ಬಂದಿರುವನೆಂದು ಮಂತ್ರಿಯಾದ ವೀರಸೇನನು ತಿಳಿದನು. ಆಗ ಅವನು ತಿರಸ್ಕಾರ-ಸಂತಾಪಗಳಿಂದ ಸ್ಕಂದಗುಪ್ತನನ್ನು ಕುರಿತು:

"ಪ್ರತಿನಿಧಿಗಳೇ, ನೀವು ಸಂಧಾನಕ್ಕಾಗಿ ಬಂದಿರದೆ, ವ್ಯಾಜ್ಯ ವನ್ನು ಕೊಂಡುಕೊಳ್ಳುವದಕ್ಕಾಗಿ ಬಂದಿರುವಿರೆಂದು ನಿಮ್ಮ ವಿಶಿಷ್ಟ ಪ್ರಕಾರದ ಮಾತುಗಳಿಂದ ವ್ಯಕ್ತವಾಗುತ್ತದೆ. ನೀವು ಮಧ್ಯಸ್ಥಿಕೆ ಗಾಗಿಯೂ, ನ್ಯಾಯಸಂಸ್ಥಾಪನೆಗಾಗಿಯೂ ಬಂದಿದ್ದರೆ, ನಿಮ್ಮ ಮುಖದಿಂದ ಈ ಬಗೆಯ ಹೆಮ್ಮೆಯ ಭಾಷಣವು ಹೊರಡುತ್ತಿದ್ದಿಲ್ಲ. ಉತ್ತರಾಪಥದವರ ನಿರರ್ಥಕ ಭಾಷಣದಿಂದ ಅಳ್ಳೆದೆಯುವ ಜನರು ಕರ್ನಾಟಕ ಸಾಮ್ರಾಜ್ಯದಲ್ಲಿ ನಿಮಗೆ ದೊರೆಯಲಾರರು. ನಮ್ಮ-ನಿಮ್ಮ ಪರಾಕ್ರಮದ ಪರೀಕ್ಷೆಯು ರಣಭೂಮಿಯಲ್ಲಾದ

ಮೇಲೆ ಸೀಮಾಂತರಗಳ ನಿರ್ಣಯುವಾದರೂ ತಾನಾಗಿ ಆಗುವದು ನೀವು ಉತ್ತರಾಪಥವನ್ನು ಗೋದಾವರಿಯು ವರೆಗೆ ತಂದು ಹಚ್ಚಿ ಹೋದರೆ, ದಕ್ಷಿಣಾಪಥವು ಭಾಗೀರಥಿಯು ವರೆಗೆ ಇರುವದೆಂಬದನ್ನು ಸಾಧಿಸುವದಕ್ಕೆ ಚಾಲುಕ್ಯಸಮ್ರಾಟರು ಹಿಂಜರಿಯುವಂತಿರುವದಿಲ್ಲ. ನಿಮಗೆ ನಿಜವಾದ ನ್ಯಾಯುವು ದೊರೆಯುಬೇಕಾಗಿದ್ದರೆ, ನರ್ಮದೆಯು ನಮ್ಮ-ನಿಮ್ಮ ರಾಜ್ಯಗಳ ಮೇರೆಯು ನೀವು ಈ ಮಾತಿಗೆ ಒಪ್ಪದಿದ್ದರೆ ಕರ್ಮಕ್ಷೇತ್ರವು ಈ ಮಾತಿನ ನಿರ್ಣಯುವನ್ನು ಮಾಡುತ್ತದೆ. ನಿಮ್ಮ ಹರ್ಷವರ್ಧನ ಸಾರ್ವಭೌಮರು ಪರಮಾವಧಿ ರಾಜ್ಯಲೋಭ ಕ್ಕೊಳಗಾಗಿ ಮನಬಂದಂತೆ ಸಂದೇಶ ಕಳುಹಿಸಿರುವರು ಪತ್ರದ ಮೇಲಿಂದ ನೋಡಲು, ಅವರು ಜಗಳಕ್ಕಾಗಿ ಕಾಲು ಕೆದರುತ್ತಿರುವರೆಂಬಂತೆ ಕಾಣುತ್ತದೆ ಕನ್ನಡಿಗರು ತಾವಾಗಿ ಮುಂದೆ ಬೀಳುವದಿಲ್ಲ; ಬಿದ್ದು ಹೊಡೆಯು ಬಂತ ಎದುರಾಳಿಗಳೊಂದಿಗೆ ಕಾದುವದಕ್ಕೆ ಮಾತ್ರ ಹಿಂದೆ ಮುಂದೆ ನೋಡುವದಿಲ್ಲ. ಉತ್ತರಾಪಥದ ದಿಗ್ವಿಜಯು ಸುಯೋಗವು ಅನಾಯಾಸವಾಗಿ ಪ್ರಾಪ್ತವಾಗುವಂತಿದ್ದರೆ, ಅಂತಹ ಸಂಧಿಯುನ್ನು ನಮ್ಮ ಸಾರ್ವಭೌಮರು ಎಂದೂ ವ್ಯರ್ಥವಾಗಗೊಡಲಾರರು. ಪ್ರತಿನಿಧಿಗಳೆ, ನಿಮ್ಮ ಒಡೆಯುರಿಗೆ ನ್ಯಾಯುಸಮ್ಮತವಾದ ಮಾರ್ಗವನ್ನು ತೋರಿಸುವದರಲ್ಲಿ ನಿಮ್ಮ ಜಾಣ್ಮೆಯುನ್ನು ತೋರಿಸಬೇಕಲ್ಲದೆ, ಅನ್ಯಾಕ್ರಾಂತ ಮಾಡುವ ಬುದ್ಧಿಯಿಂದ ಸಾಹಸಮಾಡುವದು ಅನುಚಿತವಾಗಿರುವದು. ಕರ್ನಾಟಕ ಸಾಮ್ರಾಜ್ಯದ ಮೇರೆಯು ನರ್ಮದೆಯಾಗಿರುವದು ನಾವು ಈ ನದಿಯು ಉತ್ತರಸೀಮೆಯುಲ್ಲಿ ಕಾಲ ಹಾಕುವದಿಲ್ಲ; ನೀವು ದಕ್ಷಿಣದೇಶದಲ್ಲಿ ಪ್ರವೇಶ ಮಾಡಕೂಡದು ನಿಮ್ಮ ಸಾರ್ವಭೌಮರಿಗೆ ಇಷ್ಟೇ ಸಂಗತಿಯುನ್ನು ತಿಳಿಸಿರಿ ಸುಜ್ಞರಾದರೆ ಇಷ್ಟರ ಮೇಲಿಂದ ಎಲ್ಲವನ್ನೂ ತಿಳಿದು ಕೊಳ್ಳಲಿ.''

ವೀರಸೇನನ ಈ ಮಾತುಗಳನ್ನು ಕೇಳಿ ಸ್ಕಂದಗುಪ್ತನು ದಂಗು ಬಡೆದು ಕುಳಿತನು! ಹರ್ಷವರ್ಧನನ ಖ್ಯಾತಿಯು ಅಖಿಲ ಭಾರತ

ವರ್ಷದ ತುಂಬ ಹಬ್ಬಿದ್ದರಿಂದ, ತಾವನ ಸಂದೇಶದಿಂದ ಕನ್ನಡಿಗರು ಅಳ್ಳೊಡೆಯಬಹುದೆಂದು ಅವನು ಭಾವಿಸಿದ್ದನು; ಪುಲಿಕೇಶಿಯು ಹಾಗು ವೀರಸೇನನ ಮಾತುಗಳನ್ನು ಕೇಳಿ ಅವನ ಆ ತಿಳುವಳಿಕೆಯು ಪೂರ್ಣವಾಗಿ ಬೇರೆಯಾಯಿತು. ಕರ್ನಾಟಕವೀರರು ಸಂಗ್ರಾಮೋತ್ಸುಕರೂ, ಅತ್ಯಂತ ಸತ್ವಶಾಲಿಗಳೂ ಇರುವರೆಂದು ಅವನು ದೃಢವಾಗಿ ತಿಳಿದುಕೊಂಡನು. ಪುಲಿಕೇಶಿಯನ್ನು ಅಂಜಿಸಿ ಕಾರ್ಯಸಾಧನೆ ಮಾಡಿಕೊಂಡು ಬರುವೆನೆಂದು ಸ್ವಕೀಯದ ಓಲಗದಲ್ಲಿ ಪೌರುಷದ ಮಾತುಗಳನ್ನು ಆಡಿ ಬಂದು, ಈಗ ಮೋರೆಯೊಣಗಿಸಿಕೊಂಡು ಹೋಗುವ ಪ್ರಸಂಗವು ಬಂದಿತೆಂದು ಅವನು ಅನುತಾಪಗೊಂಡನು. 'ಪ್ರಾಣೇ ನಾಶ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ' ಎಂಬಂತೆಯಾದರೂ ಮಾಡಬೇಕೆಂದು ಅವನು ಹವಣಿಸಿದನು.

"ವೀರಸೇನರೆ, ನಿಮ್ಮ ಮಾತುಗಳನ್ನು ನಾನು ಅಲ್ಲಗಳೆಯಲಾರೆನು. ವೀರೋಚಿತವೃತ್ತಿಯುಳ್ಳವರಾದ ನಿಮ್ಮ ಬಾಯಿಯಿಂದ ಈ ಬಗೆಯ ಭಾಷಣವು ಹೊರಟದ್ದು ಅಯೋಗ್ಯವೆಂದು ನಾನು ಎಂದೂ ಗೃಹಿಸೆನು. ರಾಜಕಾರಣದಲ್ಲಿ ಹಿಳ್ಳಿಯ ಧೋರಣದಿಂದ ಕಾರ್ಯ ಮಾಡಬೇಕಾಗುವದು. ನಮ್ಮ ನಿಮ್ಮ ಸಾರ್ವಭೌಮರು ಸಮಾನ ವಿಕ್ರಮಶಾಲಿಗಳಿರುವರೆಂಬದರಲ್ಲಿ ಏನೂ ಸಂದೇಹವಿಲ್ಲ. ಇವರೀರ್ವರು ಅಭಿಮಾನಕ್ಕೆ ಬಿದ್ದು ಸಂಗ್ರಾಮ ಪ್ರವೃತ್ತರಾದರೆ, ವೃಥಾ ಪ್ರಜಾಕ್ಷಯವಾಗುವದು. ನಮ್ಮ ನಿಮ್ಮಂತಹ ಮಂತ್ರಿಗಳು ಓಲಗದಲ್ಲಿದ್ದು, ಅಲ್ಪ ಕಾರ್ಯಕ್ಕಾಗಿ ಘನಘೋರ ಸಂಗ್ರಾಮವನ್ನು ಹೂಡುವದಕ್ಕೆ ಸಿದ್ಧಪಡಿಸುವದರಿಂದ, ನಮ್ಮ ನಿಮ್ಮ ಬೆಲೆಯೇ ಕಟ್ಟು ಹೋಗುವದು. ನಮ್ಮ ಸಾರ್ವಭೌಮರು ಗೋದಾವರಿಯವರೆಗೆ ಉತ್ತರಾಪಥವನ್ನು ಹಬ್ಬಿಸುವದಕ್ಕೆ ಸಿದ್ಧವಾಗುವದೂ, ನಿಮ್ಮ ಹಿಡೆಯರು ನರ್ಮದಾನದಿಯ ವರೆಗೆ ತಮ್ಮ ಆಧಿಪತ್ಯವನ್ನು ಪ್ರಸ್ಥಾಪಿಸಲೆಳಿಸುವದೂ ತೀರ ಅಯೋಗ್ಯವು. ನಾವೂ ನೀವೂ ಕೂಡಿಯೇ ಈ ಜಗಳವನ್ನು ಶಾಂತ ಪಡಿಸೋಣ. ನಾನು ನಮ್ಮ

ಸಾರ್ವಭೌಮರಿಗೆ ವಿನಂತಿ ಮಾಡಿಕೊಂಡು ಅವರನ್ನು ದಾರಿಗೆ ತರುವೆನು. ನೀವು ಪುಲಿಕೇಶಿ ಮಹಾರಾಜರಿಗೆ ತಿಳಿಸಿ ಹೇಳಿ ಮುಂದೆ ಒದಗಬಹುದಾದ ಗೊಂದಲವನ್ನು ತಪ್ಪಿಸಿರಿ. ನರ್ಮದಾ-ಗೋದಾವರಿಗಳ ನಡುವೆ ಇರುವ ಪ್ರದೇಶದಲ್ಲಿ ಅರ್ಧಭಾಗವು ಉತ್ತರಾಪಥದವರ ಅಧೀನದಲ್ಲಿರತಕ್ಕದ್ದು; ಉಳಿದ ಅರ್ಧಭಾಗವು ಕರ್ನಾಟಕ ಸಾಮ್ರಾಜ್ಯಕ್ಕೆ ಸೇರತಕ್ಕದ್ದು'' ಎಂದು ಸ್ಕಂದಗುಪ್ತನು ನುಡಿದು, ಪುಲಿಕೇಶಿಯನ್ನು ಕುರಿತು:—''ಮಹಾರಾಜರೆ, ನೀವು ಈ ಮಾತಿಗೆ ಸಮ್ಮತಿಸಿದರೆ ಉಭಯತರಿಗೂ ಸೌಖ್ಯವಾಗುವದು. ಕೇವಲ ಹರ್ಷವರ್ಧನ ಸಾರ್ವಭೌಮರಿಗೆ ರಾಜ್ಯದ ಪ್ರಾಪ್ತಿಯಾಗಬೇಕೆಂಬ ಉದ್ದೇಶದಿಂದ ನಾನು ಇಲ್ಲಿಯ ವರೆಗೆ ಬಂದಿರುವೆನೆಂದು ಗ್ರಹಿಸಲಾಗದು. ಭಾರತವರ್ಷದಲ್ಲಿಯ ಪ್ರಸಿದ್ಧ ಸಾರ್ವಭೌಮರಾದ ನಿಮ್ಮಿರ್ವರಲ್ಲಿ ಚಿರಂತನವಾಗಿ ಸ್ನೇಹವು ಉಳಿಯಬೇಕೆಂಬದೇ ನನ್ನಿಚ್ಛೆಯಿರುವದು. ಪುಲಿಕೇಶಿ ಮಹಾರಾಜರೆ, ನಿಸ್ಪೃಹವೃತ್ತಿಯವನಾದ ನನ್ನ ಪ್ರಾಮಾಣಿಕ ಅಭಿಪ್ರಾಯವನ್ನು ತಮಗೆ ತಿಳಿಸಿರುವೆನು. ಸಾರಾಸಾರ ವಿಚಾರ ಮಾಡಿ ಆಚರಣೆಯನ್ನಿಡಬೇಕೆಂದು ನನ್ನ ಆಗ್ರಹದ ವಿನಂತಿಯಿದೆ'' ಎಂದು ಸ್ಕಂದಗುಪ್ತನು ತನ್ನ ಅಸ್ಖಲಿತವಾದ ವಾಣಿಯಿಂದ ಮಾತನಾಡಿದನು.

ಸ್ಕಂದಗುಪ್ತನ ಈ ಮಾತುಗಳನ್ನು ಕೇಳಿ ಪುಲಿಕೇಶಿಯೂ, ಅವನ ತಮ್ಮಂದಿರಾದ ವಿಷ್ಣುವರ್ಧನ-ಜಯಸಿಂಹರೂ, ಅವನ ಮಕ್ಕಳಾದ ಆದಿತ್ಯವರ್ಮ-ಚಂದ್ರಾದಿತ್ಯ-ವಿಕ್ರಮಾದಿತ್ಯರೂ ಬಹಳವಾಗಿ ರೋಷಗೊಂಡರು. ಅವನನ್ನು ಅಪಮಾನಗೊಳಿಸಬೇಕೆಂದು ಪುಲಿಕೇಶಿಯ ಮಂಡಲೇಶ್ವರರಾದ ಗುಣಸಾಗರ, ದುರ್ಗಶಕ್ತಿ, ರವಿಕೀರ್ತಿ ಮೊದಲಾದವರು ಅವನಿಗೆ ಸೂಚಿಸಿದರು. ಸ್ಕಂದಗುಪ್ತನು ಉತ್ತರಾಪಥದ ಸಾರ್ವಭೌಮರ ಪ್ರತಿನಿಧಿಯಿರುವದರಿಂದ, ಅವನ ಮಾನಖಂಡನೆ ಮಾಡುವದು ಯೋಗ್ಯವಲ್ಲೆಂದು ಪುಲಿಕೇಶಿಯು ಅವರಿಗೆ ತಿಳಿಹೇಳಿದನು. ಆಗ ಅವನು ಸ್ಕಂದಗುಪ್ತನನ್ನು ಕುರಿತು:—

"ಸ್ಕಂದಗುಪ್ತರೆ, ನೀವು ಎಷ್ಟು ಬಗೆಯಿಂದ ಹೇಳಿದರೂ ನಿಮ್ಮ ಮನೋಗತವು ಈಡೇರಲಾರದು ನರ್ಮದೆಯ ದಕ್ಷಿಣದ ಲ್ಲಿಯ ಒಂದು ಪಾದದಷ್ಟು ಭೂಮಿಯನ್ನಾದರೂ ನಾನು ಉತ್ತರಾ ಪಥದ ಆಧಿಪತ್ಯದಲ್ಲಿ ಕೊಡುವದಿಲ್ಲ. ಕರ್ನಾಟಕ ಸಾಮ್ರಾಜ್ಯದ ಮೇರೆಯು ನರ್ಮದೆಯ ವರೆಗಿರುವದೆಂದೂ, ಅದರಲ್ಲಿ ಕೈ ಹಾಕ ಕೂಡದೆಂದೂ ನೀವು ನಿಮ್ಮ ಸಾರ್ವಭೌಮರಿಗೆ ತಿಳಿಸಿರಿ ನಿಮ್ಮ ಶಿಷ್ಟಾಯಿಯು ವ್ಯರ್ಥವಾಯಿತೆಂದು ಮನಸ್ಸಿನಲ್ಲಿ ಖೇದಗೊಳ್ಳ ಬೇಡಿರಿ. ತಮ್ಮ ಅಧಿಕಾರ ಸ್ವಾತಂತ್ರ್ಯಗಳನ್ನು ಪರಕೀಯರಿಗೆ ಕೊಡುವದಕ್ಕೆ ಕನ್ನಡಿಗರು ಎಂದೂ ಸಿದ್ಧರಿರುವದಿಲ್ಲ. ನಿಮ್ಮ ಒಡೆ ಯರಿಗೆ ಯುದ್ಧೋತ್ಸಾಹವಿದ್ದರೆ, ಅದಕ್ಕೆ ನಮ್ಮ ಪ್ರತಿಬಂಧವಿಲ್ಲ. ನಿಷ್ಕಾರಣವಾಗಿ ಯುದ್ಧಪ್ರಸಂಗ ಮಾಡಿ ಪ್ರಜಾಕ್ಷಯವಾಗದಂತೆ ಬುದ್ಧಿಶಾಲಿಗಳಾದ ನೀವು ಯತ್ನಿಸುವಿರೆಂದು ನಂಬಿರುವೆನು. ನಾನು ಇದಕ್ಕೂ ಹೆಚ್ಚಿಗೆ ಏನೂ ಹೇಳಲಾರೆನು.''

ಪುಲಿಕೇಶಿಯ ಸ್ಪಷ್ಟವಾದ ಮಾತಿನಿಂದ ಸ್ಕಂದಗುಪ್ತನು ನಿರು ತ್ಸಾಹಿಯಾದನು. 'ಬಂದ ದಾರಿಗೆ ಸುಂಕವಿಲ್ಲ' ಎಂಬಂತೆ, ಅವನು ಮೋರೆಯೊಣಗಿಸಿಕೊಂಡು ಕನ್ಯಕುಬ್ಜದ ದಾರಿಯನ್ನು ಹಿಡಿಯ ಬೇಕಾಯಿತು.



## ರಾಕ್ಷಸೀ ರಾಜ್ಯತೃಷ್ಣೆ!

ಉತ್ತರ ಹಿಂದುಸ್ತಾನದಲ್ಲಿ ಪ್ರಭಾಕರವರ್ಧನನೆಂಬ ಸಮ್ರಾಟನು ರಾಜ್ಯವಾಳುತ್ತಿದ್ದನು. ಅವನ ರಾಜಧಾನಿಯು ಸ್ಥಾನೇಶ್ವರವು. ಈ ಸಾರ್ವಭೌಮನು ಹೂಣ, ಗುರ್ಜರ, ಸಿಂಧ, ಗಾಂಧಾರ, ಲಾಟ, ಮಾಳವ, ಗೌಡ, ಪ್ರಾಗ್ಜ್ಯೋತಿಷ (ಬ್ರಹ್ಮದೇಶ-ಆಸಾಮು) ಮೊದ ಲಾದ ಅರಸರನ್ನು ತನ್ನ ಬಾಹುಬಲದಿಂದ ಮಾಂಡಲಿಕರನ್ನಾಗಿ ಮಾಡಿಕೊಂಡಿದ್ದನು. ವಿಕ್ರಮಾರ್ಜಿತ ಸತ್ವಶಾಲಿಯಾದ ಈ ಸಾರ್ವ ಭೌಮನಿಗೆ ಪ್ರತಾಪಶೀಲನೆಂಬ ಹೆಸರೂ ಇತ್ತು. ಇವನಿಗೆ ಯಶೋ

ಮತಿಯೆಂಬ ಮಹಾ ಸಾಧ್ವಿಯಾದ ರಾಣಿಯಿದ್ದಳು. ಪ್ರಭಾಕರ ವರ್ಧನನು ಸೂರ್ಯೋಪಾಸಕನಿದ್ದನು. ಇವನಿಗೆ ಪುತ್ರಸಂತಾನ ವಿಲ್ಲದ್ದರಿಂದ ಬಹಳ ದಿವಸಗಳ ವರೆಗೆ ಸೂರ್ಯನ ಆರಾಧನೆ ಮಾಡಿ ದನು. ಅನಂತರದಲ್ಲಿ ಅವನಿಗೆ ಯಶೋಮತಿಯ ಉದರದಿಂದ ರಾಜ್ಯವರ್ಧನನೆಂಬ ಪುತ್ರನು ಜನಿಸಿದನು ಮುಂದೆ ಐದು ವರ್ಷದ ಮೇಲೆ ಇವನಿಗೆ ಮತ್ತೊಬ್ಬ ಮಗನು ಹುಟ್ಟಿದನು. ಅವನೇ ಸತ್ಯಾ ಶ್ರಯ ಪುಲಿಕೇಶಿಯ ಪ್ರತಿಸ್ಪರ್ಧಿಯಾದ ಹರ್ಷವರ್ಧನನು! ಹರ್ಷ ವರ್ಧನನು ಜನಿಸಿ ಮೂರು ವರ್ಷಗಳ ಮೇಲೆ ಯಶೋಮತಿಯ ಉದರದಿಂದ ಒಂದು ಕನ್ಯಾರತ್ನವು ಜನಿಸಿತು. ಆ ರಾಜಕನ್ಯೆಗೆ ರಾಜಶ್ರೀಯೆಂದು ನಾಮಕರಣ ಮಾಡಲ್ಪಟ್ಟಿತು. ಯಶೋಮತಿಯ ಬಂಧುವು ತನ್ನ ಕುಮಾರನಾದ ಭಂಡಿಯನ್ನು ಶಸ್ತ್ರಾಸ್ತ್ರವಿದ್ಯೆಯನ್ನು ಕಲಿಯುವದಕ್ಕಾಗಿ ರಾಜಕುಮಾರರ ಜೊತೆಯಲ್ಲಿರಿಸಿದನು. ಯೋಗ್ಯ ವಾದ ವಯಸ್ಸು ಪ್ರಾಪ್ತವಾಗುತ್ತಲೆ ರಾಜ್ಯವರ್ಧನ-ಹರ್ಷವರ್ಧ ನರೂ, ಭಂಡಿಯೂ ಶಸ್ತ್ರಾಸ್ತ್ರಕಲೆಗಳಲ್ಲಿ ಪ್ರವೀಣರಾದರು. ರಾಜ ಶ್ರೀಯು ನೃತ್ಯ-ಗೀತೆಗಳಲ್ಲಿ ನಿಪುಣಳಾದಳು. ರಾಜಪುತ್ರರು ಪ್ರಬುದ್ಧ ರಾದೊಡನೆಯೇ ಪ್ರತಾಪವರ್ಧನನು ಮಾಳವ ರಾಜಪುತ್ರರಾದ ಕುಮಾರಗುಪ್ತ-ಮಾಧವಗುಪ್ತರನ್ನು ಅವರ ಕೈಯಲ್ಲಿ ಕೊಟ್ಟನು. ಈ ಗುಪ್ತಬಂಧುಗಳು ವಿಶ್ವಾಸಿಗಳೂ ಸ್ನೇಹಕ್ಕೆ ಯೋಗ್ಯರೂ, ಪ್ರಾ- ಮಾಣಿಕರೂ, ಶೂರರೂ, ಸಾಹಸಿಗಳೂ ಇದ್ದುದರಿಂದ, ಇವರ ಮೈತ್ರಿಯು ಲಾಭದಾಯಕವಾಗುವದೆಂದು ಪ್ರತಾಪವರ್ಧನನು ತಿಳಿದು ಅವರನ್ನು ತನ್ನ ಕುಮಾರರ ಸಂಗಡಿಗರನ್ನಾಗಿ ಮಾಡಿದನು.

ರಾಜಶ್ರೀಯು ತಾರುಣ್ಯ ಪ್ರದೇಶದಲ್ಲಿ ಪದಾರ್ಪಣ ಮಾಡಿ ದ್ದಳು. ಅವಳಿಗೆ ಯೋಗ್ಯನಾದ ವರನನ್ನು ಹುಡುಕುವದರಲ್ಲಿ ಸಾರ್ವ ಭೌಮನು ತೊಡಗಿದ್ದನು ರಾಜಶ್ರೀಯು ಅತ್ಯಂತ ಲಾವಣ್ಯವತಿ ಯಿದ್ದುದರಿಂದ, ಎಷ್ಟೋ ಕಡೆಯಿಂದ ಬೇಡಿಕೆಯಾಗಿತ್ತು. ಕೇವಲ ರಾಜ್ಯೈಶ್ವರ್ಯಗಳಿಗೆ ಮರುಳಾಗದೆ, ಕುಲ-ಶೀಲಗಳನ್ನು ಪರಿಶೀಲಿಸಿ,

ಶರೀರಸಂಬಂಧ ಮಾಡಬೇಕೆಂದು ಪ್ರತಾಪವರ್ಧನನ ಮನೀಷೆ ಯಿತ್ತು. ಮೌಖರಿ ಮನೆತನದ ಅವಂತಿವರ್ಮನ ಮಗನಾದ ಗೃಹ ವರ್ಮನು ಗುಣ-ರೂಪ ಸಂಪನ್ನನೂ, ಸತ್ಕುಲಜಾತನೂ ಎಂಬದು ಅವನಿಗೆ ಗೊತ್ತಾದ್ದರಿಂದ, ತನ್ನ ವಾತ್ಸಲ್ಯದ ಕುವರಿಯನ್ನು ಗೃಹ ವರ್ಮನಿಗೆ ಧಾರೆಯೆರೆದು ಕೊಟ್ಟನು.

ರಾಜಕುಮಾರರು ಪ್ರಬುದ್ಧರಾಗಿ ಎಷ್ಟೋ ಪರಾಕ್ರಮದ ಕಾರ್ಯಗಳನ್ನು ಮಾಡತೊಡಗಿದ್ದರಿಂದ, ಪ್ರತಾಪವರ್ಧನನು ಕೃತಾ ರ್ಥನಾದೆನೆಂದು ಆನಂದಬಡತೊಡಗಿದನು. ಅಷ್ಟರಲ್ಲಿ ಹೂಣರು ಉತ್ತರದಲ್ಲಿ ಪುಂಡತನ ಮಾಡತೊಡಗಿದ್ದರಿಂದ, ಅವರನ್ನು ಬಗ್ಗು ಬಡೆಯುವದಕ್ಕಾಗಿ ಈ ಸಾರ್ವಭೌಮನು ರಾಜ್ಯವರ್ಧನನನ್ನು ಸೈನ್ಯ ಸಹಿತವಾಗಿ ಕಳುಹಿಸಿದನು. ರಾಜ್ಯವರ್ಧನನ ಸಂಗಡ ವಿಜಯ ಯಾತ್ರೆಗಾಗಿ ಹರ್ಷವರ್ಧನನೂ ಹೋಗಿದ್ದನು; ಆದರೆ ಬೇಟೆಯಲ್ಲಿ ಅವನಿಗೆ ಹೆಚ್ಚಿಯ ಪ್ರೇಮವಿದ್ದುದರಿಂದ, ಮುಂದೆ ಸಾಗಿ ಹೋಗದೆ, ಹಿಮಾಲಯದ ವನಪ್ರದೇಶದಲ್ಲಿ ಮೃಗಯಾವಿಹಾರಕ್ಕಾಗಿ ನಿಂತನು.

ಇತ್ತ ಪ್ರಭಾಕರವರ್ಧನನು ವಿಷಮಜ್ವರದಿಂದ ಹಾಸಿಗೆ ಯನ್ನು ಹಿಡಿದನು. ಈ ಸಂಗತಿಯು ದೂತಮುಖದಿಂದ ಹಿಮಾ ಲಯದಲ್ಲಿ ಬೇಟೆಗಾಗಿ ನಿಂತಿದ್ದ ಹರ್ಷವರ್ಧನನಿಗೆ ತಿಳಿದ ಕೂಡಲೆ ಅವನು ಹಸಿವೆ-ನೀರಡಿಕೆಗಳ ಪರಿವೆಯಿಲ್ಲದೆ ಸ್ಥಾನೇಶ್ವರಕ್ಕೆ ಬಂದು ತಲುಪಿದನು. ತನ್ನ ತಂದೆಯು ಜೀವಂತನಾಗಿದ್ದದ್ದನ್ನು ನೋಡಿ ಪಿತೃಭಕ್ತನಾದ ಆ ರಾಜಕುಮಾರನಿಗೆ ಪರಮಾನಂದವಾಯಿತು. ಅವನು ಭಕ್ತಿಯಿಂದ ತಂದೆಯ ಚರಣಗಳ ಮೇಲೆ ಮಸ್ತಕವನ್ನಿರಿಸಿ ದನು. ಪ್ರಭಾಕರವರ್ಧನನು ಅತ್ಯಂತ ಪ್ರೇಮದಿಂದ ಪುತ್ರನನ್ನು ಮುಂಡಾಡಿ ಆಶೀರ್ವದಿಸಿದನು. ತನ್ನ ಕಡೆಯ ಭೆಟ್ಟಿಗಾಗಿ ಜ್ಯೇಷ್ಠ ಪುತ್ರನು ಬರಲಿಲ್ಲವೆಂದು ಅವನು ಬಹಳೇ ವಿಷಾದಗೊಂಡನು. ಆಗ ಅವನು ಹರ್ಷವರ್ಧನನಿಗೆ ಹಿತೋಪದೇಶ ಮಾಡಿ:--"ಪ್ರಜಾರಂಜನ ಯೋಗದಿಂದಲೇ ರಾಜನು ಕೀರ್ತಿವಂತನೂ, ಪ್ರಜೆಗಳ ಪ್ರೇಮ

ಪಾತ್ರನೂ ಆಗುವನು. ನೀನು ಆಜೀವವೂ ನಿನ್ನ ಅಣ್ಣನೊಡನೆ ಪ್ರೇಮದಿಂದ ನಡೆದು, ಅವನ ರಾಜ್ಯಕಾರ್ಯದಲ್ಲಿ ನೆರವಾಗುತ್ತಿರು" ಎಂದು ಹೇಳಿದನು.

ಪ್ರಭಾಕರವರ್ಧನನು ದಿನದಿನಕ್ಕೆ ಹೆಚ್ಚು ಕ್ಷೀಣವಾಗತೊಡ ಗಿದನು. ಅವನು ಬದುಕುವದಿಲ್ಲೆಂದು ಎಲ್ಲ ಜನರಿಗೆ ಮನವರಿಕೆ ಯಾಯಿತು. ತನ್ನ ಪತಿಯು ಇಹಲೋಕ ತ್ಯಾಗ ಮಾಡುವನೆಂಬದು ಅವನ ರಾಣಿಯಾದ ಯಶೋಮತಿಗೆ ತಿಳಿದ ಕೂಡಲೆ, ಅವಳು ತನ್ನ ಸೌಭಾಗ್ಯವನ್ನು ತೆಗೆದುಕೊಂಡು ಪತಿಗಿಂತ ಪೂರ್ವದಲ್ಲಿಯೇ ಮರಣ ಹೊಂದಬೇಕೆಂದು ನಿಶ್ಚಯಿಸಿದಳು. ಅವಳು ಅಗ್ನಿಕಾಷ್ಠಭಕ್ಷಣೆ ಮಾಡುವದಕ್ಕಾಗಿ ಸಿದ್ಧಳಾದ ಕೂಡಲೆ ಹರ್ಷವರ್ಧನನು ತಾಯಿಯ ಬಳಿಗೆ ಹೋಗಿ:—

"ಮಾತೆ, ದೈವಸಂಕಲ್ಪದಿಂದ ಪಿತನು ಇಹಲೋಕವನ್ನು ತ್ಯಜಿ ಸುವನು. ಅದಕ್ಕಾಗಿ ನೀನು ಆತ್ಮತ್ಯಾಗ ಮಾಡುವದೇಕೆ? ಈರ್ವರೂ ಒಮ್ಮೆಲೆ ತ್ಯಜಿಸಿ ಹೋದರೆ ನಮಗೆ ಮಾರ್ಗದರ್ಶಕರಾರು? ಮಾತಾ ಪಿತೃವಿಹೀನರಾಗಿ ನಾವು ನಿರಾಧಾರಿಗಳಂತೆ ಸಂಕಟದಲ್ಲಿ ಬೀಳುವದು ನಿಮಗೆ ಯೋಗ್ಯವೆನಿಸುವದೆ? ಆತ್ಮಘಾತದ ವಿಚಾರವನ್ನು ಬದಿಗಿ ರಿಸು. ಪರಮಾತ್ಮನ ಅನುಗ್ರಹವಿದ್ದರೆ ಪಿತನು ಜೀವಿಸಬಹುದು. ನೀನು ಹೀಗೆ ನಿರಾಶೆಗೊಂಡು ಘೋರಕರ್ಮವನ್ನಾಚರಿಸಬೇಡ."

"ಹರ್ಷವರ್ಧನಾ, ಪತಿಯು ಜೀವಿಸುವದಿಲ್ಲವೆಂದು ನನ್ನ ಮನವರಿಕೆಯಾಗಿರುವದು. 'ಸೌಭಾಗ್ಯವತಿ'ಯೆನಿಸಿಕೊಂಡು ಪರ ಲೋಕವನ್ನು ಹೊಂದುವದು ಸಾಧ್ವೀಜನರಿಗೆ ಭೂಷಣಾವಹವಿರು ವದು. ನಾನು ವೀರಪುತ್ರಿಯೂ, ವೀರಪತ್ನಿಯೂ, ವೀರಮಾತೆಯೂ, ಆದರ್ಶವೀರಾಂಗನೆಯೂ ಆಗಿರುವೆನು. ಹೀಗಿದ್ದ ಮೇಲೆ ಮರಣಕ್ಕೆ ಅಂಜಲೇಕೆ? ನೀನೂ ರಾಜ್ಯವರ್ಧನನೂ ಪ್ರಬುದ್ಧರಾಗಿರುವಿರಿ; ಪರಾಕ್ರಮಿಗಳಿರುವಿರಿ. ನೀವು ನಿಮ್ಮ ಬಾಹುಬಲದಿಂದ ರಾಜ್ಯರಕ್ಷಣೆ ಮಾಡುವಿರೆಂಬುದರ ನಂಬಿಗೆಯು ನನಗಾಗಿರುವದು. ರಾಜಶ್ರೀಯು

ಪತಿಗೃಹದಲ್ಲಿ ಆನಂದದಿಂದಿರುವಳು. ಹೀಗಿದ್ದ ಮೇಲೆ ವೈಧವ್ಯ ದುಃಖವನ್ನನುಭವಿಸುವದಕ್ಕೆ ನನಗೇಕೆ ಹೇಳುವಿ? ನಾನು ನನ್ನ ನಿಶ್ಚಯವನ್ನು ಎಂದೂ ತಿರುಗಿಸಲಾರೆನು. ಈ ವೇಳೆಯಲ್ಲಿ ರಾಜ್ಯ ವರ್ಧನನೂ, ರಾಜಶ್ರೀಯೂ ಭೆಟ್ಟಿಯಾಗಿದ್ದರೆ ಹಿತಾಗುತ್ತಿತ್ತು."

ಯಶೋಮತಿಯು ಹೀಗೆ ಮಗನಿಗೆ ಹೇಳಿ ಅಗ್ನಿಪ್ರವೇಶದ ಸಿದ್ಧತೆಯಲ್ಲಿ ತೊಡಗಿದಳು. ಹರ್ಷವರ್ಧನನು ಎಷ್ಟು ವಿಧದಿಂದ ಪ್ರಯತ್ನಿಸಿದರೂ ಆ ಸಾಧ್ವೀಮಣಿಯು ಸ್ವೀಕೃತಕಾರ್ಯದಿಂದ ಪರಾವೃತ್ತಳಾಗಲಿಲ್ಲ. ಅವಳು ಅಗ್ನಿಕಾಷ್ಠಭಕ್ಷಣೆ ಮಾಡಿ ಸುರಲೋಕವನ್ನು ಹೊಂದಿದಳು! ಪ್ರಭಾಕರವರ್ಧನನಾದರೂ ಮುಂದೆ ಬೇಗನೆ ಇಹಲೋಕವನ್ನು ತ್ಯಜಿಸಿದನು.

ಹೂಣ ರಾಜನಾದ ಪ್ರವರಸೇನನನ್ನು ಜಯಿಸಿ, ರಾಜ್ಯವರ್ಧನನು ವಿಜಯಾನಂದದಿಂದ ಸ್ಥಾನೇಶ್ವರಕ್ಕೆ ಬಂದನು. ಆಗ ರಾಜಧಾನಿಯಲ್ಲಿ ನೋಡಿದತ್ತ ಚಿಂತಾಜನಕ ಪರಿಸ್ಥಿತಿಯೇ ಕಾಣತೊಡಗಿತ್ತು. ಅವನು ಅರಮನೆಯನ್ನು ಸೇರಿದ ಕೂಡಲೆ ಮಾತಾ-ಪಿತೃ ವಿಯೋಗವಾದದ್ದು ಅವನಿಗೆ ತಿಳಿಯಿತು. ಈ ಶೋಚನೀಯ ಸಂಗತಿಯಿಂದ ರಾಜ್ಯವರ್ಧನನ ಸ್ಥಿತಿಯು ವಿಚಿತ್ರವಾಯಿತು. ಸಂಸಾರದಲ್ಲಿ ಸೌಖ್ಯವಿಲ್ಲೆಂದು ಬಗೆದು, ಅವನು ವನವಾಸಕ್ಕೆ ಸಿದ್ಧನಾದನು. ಆಗ ಅವನು ಹರ್ಷವರ್ಧನನನ್ನು ಕರೆದು:—

"ತಮ್ಮಾ, ನನಗೆ ರಾಜ್ಯವಾಳಬೇಕೆಂಬ ಉತ್ಸುಕತೆಯಿರುವದಿಲ್ಲ. ಪುರವಾಸಕ್ಕಿಂತಲೂ ವನವಾಸವೇ ನನಗೆ ಸೌಖ್ಯಪ್ರದವಾಗಿ ತೋರಲಾರಂಭಿಸಿರುವದು. ನೀನು ರಾಜ್ಯಭಾರ ವಹಿಸಿ, ಪ್ರಜೆಗಳನ್ನು ಮಕ್ಕಳಂತೆ ಪರಿಪಾಲಿಸುತ್ತ ನಮ್ಮ ರಾಜವಂಶದ ಕೀರ್ತಿಯು ಅಜರಾಮರವಾಗಿರುವಂತೆ ಯತ್ನಿಸು."

ಪರಮಪೂಜ್ಯ ಮಾತಾ-ಪಿತೃಗಳ ವಿಯೋಗವಾದ್ದರಿಂದಲೂ, ಪ್ರೀತಿಯ ಬಂಧುವು ವನವಾಸಕ್ಕೆ ಹೊರಡಲುದ್ಯುಕ್ತನಾದದ್ದರಿಂದಲೂ ಹರ್ಷವರ್ಧನನಿಗೆ ಪರಮಾವಧಿಯಾದ ವ್ಯಸನವಾಯಿತು.

ಅವನಿಗೆ ಸಂಸಾರವು ಅಸಾರವಾಗಿ ತೋರಲಾರಂಭಿಸಿತು. ಜೀವಿತದ ವಿಷಯದಲ್ಲಿ ಔದಾಸೀನ್ಯವು ಹುಟ್ಟಿತು. ಆಗ ಅವನು ತನ್ನ ಅಣ್ಣನನ್ನು ಕುರಿತು:—

"ಅಣ್ಣಾ, ಮಾತಾ-ಪಿತೃ ವಿಯೋಗದಿಂದ ದುಃಖವಾಗುವದು ಸ್ವಾಭಾವಿಕವು. ಅದಕ್ಕಾಗಿ ನೀನು ಈ ಬಗೆಯ ವಿರಕ್ತಿಯನ್ನು ಹೊಂದಿ, ವನವಾಸಕ್ಕೆ ತೆರಳುವದು ಅನುಚಿತವು. ಈಗಿನ ದುಃಖವು ಕಡೆತನಕ ಉಳಿಯಲಾರದು. ಪಟ್ಟಬಾಧ್ಯನಾದ ನೀನು ಪ್ರಜಾರಕ್ಷಣೆಯ ಕರ್ತವ್ಯವನ್ನು ಬದಿಗಿರಿಸಿ ರಾಜ್ಯತ್ಯಾಗ ಮಾಡುವದು ಅಧರ್ಮವು"

"ಹರ್ಷವರ್ಧನಾ, ನನಗೀಗ ಧರ್ಮಾಧರ್ಮಗಳ ಪರಿವೆಯಿರುವದಿಲ್ಲ. ಪುರವಾಸವು ನನ್ನ ಮನಸ್ಸನ್ನು ಶಾಂತಗೊಳಿಸದ್ದರಿಂದ, ವನಕ್ಕೆ ಹೊರಡಲುದ್ಯುಕ್ತನಾಗಿರುವೆನು. ನೀನು ನನ್ನನ್ನು ತಡೆಯಲೆತ್ನಿಸಬೇಡ."

ರಾಜ್ಯವರ್ಧನನು ಹರ್ಷವರ್ಧನನಿಗೆ ಹೀಗೆ ಹೇಳುತ್ತಿರಲು, ಮಾಳವರಾಜನಾದ ದೇವಗುಪ್ತನು ಗೃಹವರ್ಮನನ್ನು ಕೊಂದು, ರಾಜಶ್ರೀಯನ್ನು ಸೆರೆಮನೆಯಲ್ಲಿರಿಸಿದ ಸಂಗತಿಯು ದೂತಮುಖದಿಂದ ತಿಳಿಯಿತು. ಯಃಕಶ್ಚಿತನಾದ ಮಾಳವರಾಜನು ಸಾಮ್ರಾಜ್ಯದ್ರೋಹಿಯಾಗಿ ನಿಂತು, ಇಂತಹ ನೀಚಕೃತ್ಯವನ್ನು ಮಾಡಿದ್ದರಿಂದ, ರಾಜ್ಯವರ್ಧನನು ಸಿಟ್ಟಿನಿಂದ ಉರಿಯತೊಡಗಿದನು. ಅವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸಬೇಕೆಂದು ರಾಜ್ಯವರ್ಧನನು ನಿರ್ಧರಿಸಿಕೊಂಡನು. ಅವನಲ್ಲಿ ಹುಟ್ಟಿದ್ದ ವಿರಕ್ತಿಯು ಸಂಪೂರ್ಣವಾಗಿ ನಷ್ಟಹೊಂದಿ, ಆ ಸ್ಥಳದಲ್ಲಿ ಸೇಡು ತೀರಿಸಿಕೊಳ್ಳುವ ಭಾವನೆಯು ಪ್ರಾದುರ್ಭವಿಸಿತು.

ರಾಜ್ಯವರ್ಧನನು ಹತ್ತುಸಾವಿರ ಅಶ್ವದಳದೊಂದಿಗೆ ಮಾಳವರಾಜನ ಮೇಲೆ ಸಾಗಿ ಹೋದನು. ಅವನು ತನ್ನ ಸಂಗಡ ಆಳಿಯನಾದ ಭಂಡಿಯನ್ನು ಕರೆದುಕೊಂಡು ಹೋಗಿದ್ದನು. ರಾಜ್ಯವರ್ಧ

ನನ ಮಹಾದಳಕ್ಕೆ ಮಾಳವರಾಜನು ಈಡಾಗಲಿಲ್ಲ. ರಾಜ್ಯವರ್ಧ ನನಿಗೆ ಮಹಾವಿಜಯವು ಪ್ರಾಪ್ತವಾಯಿತು! ಆದರೆ ಗೌಡ ರಾಜನಾದ ಶಶಾಂಕನು ಮೋಸದಿಂದ ರಾಜ್ಯವರ್ಧನನ ಕೊಲೆ ಮಾಡಿದನು! ಈ ಸಂಗತಿಯು ಸ್ಥಾನೇಶ್ವರಕ್ಕೆ ತಿಳಿದ ಕೂಡಲೆ ಹರ್ಷವರ್ಧನನು ಬಹಳೇ ದುಃಖಿತನಾದನು. ಮಾತಾ-ಪಿತೃಗಳೂ, ಬಂಧುವೂ, ಬೀಗನಾದ ಗೃಹವರ್ಮನೂ ಸ್ವಲ್ಪ ದಿನಗಳ ಅವಧಿಯಲ್ಲೇ ಮಡಿದುದರಿಂದ ಅವನು ದಿಙ್ಮೂಢನಾದನು! ಆಗ ಭಾನಿಯೆಂಬ ಮಂತ್ರಿಯೂ, ಸ್ಕಂದಗುಪ್ತನೆಂಬ ಹಸ್ತಿಸೇನಾಪತಿಯೂ, ಸಿಂಹನಾದ ಸೇನಾಪತಿಯೂ ಅವನಿಗೆ ಉಪದೇಶ ಮಾಡಿ ಪ್ರೋತ್ಸಾಹನೆಯನ್ನು ಕೊಟ್ಟರು ಗಜಸೇನಾಪತಿಯಾದ ಸ್ಕಂದಗುಪ್ತನು ಅವನಿಗೆ ಸ್ಫೂರ್ತಿಯು ಹುಟ್ಟುವಂತೆ ಬೋಧಿಸಿದನು ಆಗ ಹರ್ಷವರ್ಧನನು ಮನಶ್ಶಾಂತಿಗಾಗಿ ಅವಲೋಕಿತೇಶ್ವರ ಬೋಧಿಸತ್ವನ ಬಳಿಗೆ ಹೋದನು. ಪಿತನ ಹಾಗು ಬಂಧುವಿನ ವಿಯೋಗದಿಂದ ಹರ್ಷವರ್ಧನನ ಮನಸ್ಸು ತೊಂದರೆಗೊಳಗಾಗಿರುವದೆಂದು ಬೋಧಿಸತ್ವನಿಗೆ ತಿಳಿಯಿತು. ಆಗ ಅವನು ಹರ್ಷವರ್ಧನನನ್ನು ಕುರಿತು:—

"ನೀನು ಪೂರ್ವಜನ್ಮದಲ್ಲಿ ಬೌದ್ಧಭಿಕ್ಷುವಾಗಿದ್ದು, ತಪೋಬಲದಿಂದ ಸಮ್ರಾಟನಾಗಿರುವೆ. ನೀನು ಸಿಂಹಾಸನಾರೂಢನಾಗಿ ರಾಜನೆನಿಸಿಕೊಳ್ಳಬೇಡ. ಕುಮಾರರಾಜನೆಂಬ ಅಭಿಧಾನದಿಂದ ರಾಜಪ್ರತಿನಿಧಿಯಂತೆ ರಾಜ್ಯಶಕಟವನ್ನು ಸಾಗಿಸು. ಗೌಡರಾಜನಾದ ಶಶಾಂಕನು ಬೌದ್ಧಧರ್ಮದ ಉಚ್ಛೇದಗೊಳಿಸಲಿಕ್ಕೆ ಸಿದ್ಧನಾಗಿರುವನು. ನೀನು ಅವನ ಅಪರಾಧಕ್ಕೆ ಸರಿಯಾಗಿ ಶಾಸನವನ್ನು ವಿಧಿಸು."

ಅವಲೋಕಿತೇಶ್ವರ ಬೋಧಿಸತ್ವನ ಮಾತಿನಿಂದ ಹರ್ಷವರ್ಧನನಲ್ಲಿ ನವ್ಯಸ್ಫೂರ್ತಿಯು ಉದಯಿಸಿತು. ಅವನು ತನ್ನ ಸಿಂಹಾಸನವನ್ನು ಸ್ಥಾನೇಶ್ವರದಿಂದ ಒಯ್ದು, ಕನ್ಯಕುಬ್ಜದಲ್ಲಿ ಸ್ಥಾಪಿಸಿದನು. ಆಗ ಅವನು 'ಶಿಲಾದಿತ್ಯನೆ'ಂಬ ಬಿರುದು ಧರಿಸಿದನು. ಅವನು ತನ್ನ ನೂತನ ರಾಜಧಾನಿಯಲ್ಲಿ ಎಲ್ಲ ಮಂಡಲೇಶ್ವರರನ್ನೂ, ಸರದಾರರನ್ನೂ

ಕರೆಯಿಸಿ, ಗೌಡರಾಜನ ಮೇಲೆ ದಂಡೆತ್ತಿ ಹೋಗುವದಕ್ಕಾಗಿ ಸಹಾಯ ಮಾಡಬೇಕೆಂದು ಅವರಿಗೆ ಹೇಳಿದನು.

'यदि परिमितैरेव दिवसैर्निर्गौडां न करोमि मेदिनीं
ततस्तनूनपाति पीत सर्पिषि पतंगइवपातकी पातयाम्यात्मानम्'

ಎಂದು ಅವನು ಘೋರ ಪ್ರತಿಜ್ಞೆ ಮಾಡಿದನು. ರಾಜನ ದಂಡ ಯಾತ್ರೆಯಲ್ಲಿ ತೊಡಗಿ ಅವನಿಗೆ ವಿಜಯ ಸಂಪಾದನೆ ಮಾಡಿಕೊಡ ದಿದ್ದರೆ, ತಮ್ಮ ಸಮ್ರಾಟನು ಅಗ್ನಿಕಾಷ್ಠಭಕ್ಷಣೆ ಮಾಡುವನೆಂದು ತಿಳಿದು, ಎಲ್ಲ ಮಂಡಲೇಶ್ವರರೂ, ಸರದಾರ-ಸೇನಾಪತಿಗಳೂ ಅವ ನಿಗೆ ಮನಃಪೂರ್ವಕ ಸಹಾಯ ಮಾಡುವದಕ್ಕಾಗಿ ಒಪ್ಪಿಕೊಂಡರು. ಕೂಡಲೆ ಅವನು ಮಹಾಸೇನೆಯೊಡನೆ ಗೌಡಾಪರಾಧ ಪ್ರಾಯಶ್ಚಿತ್ತ ಕ್ಕಾಗಿ ಹೊರಟನು.

ಹರ್ಷವರ್ಧನನ ಸೈನ್ಯದಲ್ಲಿ ಐದುಸಾವಿರ ಆನೆಗಳೂ, ಇಪ್ಪತ್ತು ಸಾವಿರ ಅಶ್ವದಳವೂ, ಐವತ್ತುಸಾವಿರ ಕಾಲಾಳುಗಳೂ ಇದ್ದವು. ಈ ಅಪರಿಮಿತವಾದ ಸೈನ್ಯಕ್ಕೆ ಶಶಾಂಕನು ಈಡಾಗಲಿಲ್ಲ. ಹರ್ಷವರ್ಧ ನನು ಅವನನ್ನು ರಣದಲ್ಲಿ ವಧಿಸಿ, ತನ್ನ ಭೀಷಣವಾದ ಪ್ರತಿಜ್ಞೆ ಯನ್ನು ಪೂರ್ತಿಗೊಳಿಸಿಕೊಂಡನು.

ಗೌಡದೇಶದ ಮೇಲೆ ದಂಡೆತ್ತಿ ಹೋಗುವ ಪೂರ್ವದಲ್ಲಿ ಹರ್ಷ ವರ್ಧನನು ತನ್ನ ಭಗಿನಿಯಾದ ರಾಜಶ್ರೀಯನ್ನು ಬಂಧಮುಕ್ತಗೊಳಿ ಸಿದ್ದನು. ಪತಿಮರಣದಿಂದ ಅವಳು ಆತ್ಮತ್ಯಾಗ ಮಾಡುವದಕ್ಕೆ ಸಿದ್ಧಳಾದಳು. ಆಗ ದಿವಾಕರಮಿತ್ರನೆಂಬ ಬೌದ್ಧಭಿಕ್ಷುವು ಅವಳಿಗೆ ಉಪದೇಶ ಮಾಡಿ, ಆ ಕಟುಕರ್ತವ್ಯದಿಂದ ಪರಾವರ್ತಗೊಳಿಸಿದನು.

ಹರ್ಷವರ್ಧನನು ತನ್ನ ಬಾಹುಬಲದಿಂದ ಉತ್ತರಾಪಥವನ್ನು ತನ್ನ ಸಾಮ್ರಾಜ್ಯಛತ್ರದಲ್ಲಿ ತೆಗೆದುಕೊಂಡನು. ಪ್ರಾಗ್ಜ್ಯೋತಿಷದ ಅರಸನಾದ ಕುಮಾರ ಭಾಸ್ಕರವರ್ಮನು ಸಹ ಅವನ ಮಾಂಡಲಿಕ ತ್ವಕ್ಕೆ ಒಪ್ಪಿಕೊಂಡು, ರತ್ನಖಚಿತ ಛತ್ರ-ಚಾಮರ ಮೊದಲಾದವು

ಗಳನ್ನು ಕಾಣಿಕೆಯಾಗಿ ಒಪ್ಪಿಸಿದನು.

ಉತ್ತರಾಪಥವೆಲ್ಲ ತನ್ನ ಹಸ್ತಗತವಾದೊಡನೆಯೆ ಹರ್ಷವರ್ಧನನ ರಾಜ್ಯಲೋಭವು ಅಪರಿಮಿತವಾಯಿತು. ಇಡೀ ಹಿಂದುಸ್ಥಾನವನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳಬೇಕೆಂದು ಅವನು ದೃಢಸಂಕಲ್ಪ ಮಾಡಿಕೊಂಡನು ಆಗ ದಕ್ಷಿಣದಲ್ಲಿ ಸತ್ಯಾಶ್ರಯ ಪುಲಿಕೇಶಿಯು ಸಾರ್ವಭೌಮನಾಗಿದ್ದನು. ಅವನನ್ನು ತನ್ನ ಮಾಂಡಲಿಕನನ್ನಾಗಿ ಮಾಡಿಕೊಂಡರೆ, ಇಡೀ ಭರತಭೂಮಿಯು ತನ್ನ ಆಧಿಪತ್ಯಕ್ಕೊಳಗಾದಂತಾಗುವದೆಂದು ಅವನು ಭಾವಿಸಿದನು. ಪುಲಿಕೇಶಿಯ ಪರಾಕ್ರಮದ ಖ್ಯಾತಿಯನ್ನು ಅವನು ಕೇಳಿದ್ದನು. ಒಮ್ಮೆಲೆ ಅವನ ಮೇಲೆ ಸಾಗಿ ಹೋಗಿ ವಿಜಯವನ್ನು ಸಂಪಾದಿಸುವದು ಅವನಿಗೆ ಕಠಿಣವಾಗಿ ತೋರಿದ್ದರಿಂದಲೂ, ನಿಷ್ಕಾರಣವಾಗಿ ಯುದ್ಧಯಾತ್ರೆ ಮಾಡುವದು ಅಯೋಗ್ಯವೆನಿಸಿದ್ದರಿಂದಲೂ ಅವನು ಕಾಲು ಕೆದರಿ ಜಗಳ ತೆಗೆಯಲುದ್ಯುಕ್ತನಾದನು. ಉತ್ತರಾಪಥದ ಸಾಮ್ರಾಜ್ಯವು ಗೋದಾವರಿಯ ವರೆಗೆ ಇರುವದೆಂದೂ, ಆ ನದಿಯ ಉತ್ತರದಲ್ಲಿ ಕಾಲಿಡಬಾರದೆಂದೂ ಅವನು ಪುಲಿಕೇಶಿಗೆ ತಿಳಿಸಬೇಕೆಂದು ಹವಣಿಸಿದನು. ಈ ಕಾರ್ಯಕ್ಕಾಗಿ ಅವನು ತನ್ನ ಹಸ್ತಿಸೇನಾಪತಿಯಾದ ಸ್ಕಂದಗುಪ್ತನೆಂಬ ರಾಜಕಾರಣಪಟುವನ್ನು ಶಿಷ್ಟಾಯಿಗೆಂದು ವಾತಾಪಿಪುರಕ್ಕೆ ಕಳುಹಿಸಿದನು.

ಸ್ಕಂದಗುಪ್ತನು ವಾತಾಪಿಪುರಕ್ಕೆ ಬಂದು ಸತ್ಯಾಶ್ರಯ ಪುಲಿಕೇಶಿಗೆ ಭೆಟ್ಟಿಯಾಗಿ ಉತ್ತರಾಪಥದ ಸಂದೇಶವನ್ನು ತಿಳಿಸಿದನು.

ಪುಲಿಕೇಶಿಯು ಅವನಿಗೆ ಉತ್ತರವನ್ನೇನು ಕೊಟ್ಟನೆಂಬದೂ, ಅವನು 'ಬಂದ ದಾರಿಗೆ ಸುಂಕವಿಲ್ಲ' ಎಂಬಂತೆ ಹೇಗೆ ಹಿಂತಿರುಗಬೇಕಾಯಿತೆಂಬದೂ ಹಿಂದಿನ ಪ್ರಕರಣದಲ್ಲಿ ವಿವರಿಸಿದೆ.

ಹರ್ಷವರ್ಧನನು ಶೂರನೂ, ಉದಾರನೂ, ಧರ್ಮವಂತನೂ ಆಗಿದ್ದನು. ಅವನ ಆಸ್ಥಾನದಲ್ಲಿ ಬಾಣ, ಮಯೂರ, ಮಾತಂಗ, ದಿವಾಕರ ಮೊದಲಾದ ನಾಮಾಂಕಿತ ಕವಿಗಳಿದ್ದರು. ಸ್ವತಃ ಈ

ಸಾರ್ವಭೌಮನೇ ಶ್ರೇಷ್ಠ ಕವಿಯಾಗಿದ್ದನು. ಅವನ ನಿರ್ಮಲವಾದ ಯಶಕ್ಕೆ ಕಲಂಕಪ್ರಾಯವಾದ ಒಂದು ಅವಗುಣವು ಅವನಲ್ಲಿತ್ತು. ಅದಾವದೆಂದರೆ, ಅವನು ರಾಕ್ಷಸೀರಾಜ್ಯತೃಷ್ಣೆಯುಳ್ಳವನಾಗಿದ್ದನು. ಇಡೀ ಭಾರತವರ್ಷವನ್ನು ತನ್ನ ಅಂಕಿತದಲ್ಲಿ ತೆಗೆದುಕೊಳ್ಳಬೇಕೆಂದು ಅವನು ದೀರ್ಘಸಾಹಸಕ್ಕೊಳಗಾಗಿದ್ದನು. ವಿಕ್ರಮಾರ್ಜಿತ ಸತ್ವಶಾಲಿಗಳಾದ ಅರಸರಲ್ಲಿ ಪರರಾಷ್ಟ್ರ ಪಾದಾಕ್ರಾಂತ ಮಾಡಿಕೊಳ್ಳಬೇಕೆಂಬ ಗುಣವು ನೈಸರ್ಗಿಕವಾಗಿರುವದೋ-ಏನೋ ಯಾರು ಬಲ್ಲರು? ಇಂದಿನವರೆಗೆ ಒಂದು ರಾಷ್ಟ್ರವು ಮತ್ತೊಂದು ಜನಾಂಗದ ವಶವಾಗಲಿಕ್ಕೆ ಈ ರಾಕ್ಷಸೀ ರಾಜ್ಯತೃಷ್ಣೆಯೇ ಕಾರಣವಲ್ಲವೆ?

—0—

## ಕನ್ಯಕುಬ್ಜದ ಓಲಗದಲ್ಲಿ.

ಕನ್ಯಕುಬ್ಜವು+ ಹರ್ಷವರ್ಧನನ ರಾಜಧಾನಿಯಾಗಿ ಬಹಳ ದಿವಸಗಳಾಗಿರಲಿಲ್ಲ. ಮೊದಲು ಈ ಪಟ್ಟಣವು ಸಾಧಾರಣ ತರಹದ್ದಾಗಿದ್ದು, ರಾಜಧಾನಿಯಾದಂದಿನಿಂದ ಅತಿಶಯವಾಗಿ ಬೆಳೆದಿತ್ತು. ಎಲ್ಲಿ ನೋಡಿದಡಲ್ಲಿ ಅಂತಸ್ತುಗಳಿಂದ ಕೂಡಿದ ಮನೆಗಳೂ, ಗೋಪುರಗಳಿಂದೊಡಗೂಡಿದ ಸುಂದರವಾದ ದೇವಾಲಯಗಳೂ ಕಂಗೊಳಿಸುತ್ತಲಿದ್ದವು.

+ ಕುಶನಾಭರಾಜನಿಗೆ ನೂರು ಮಂದಿ ಕನ್ಯೆಯರಿದ್ದರು. ಅವರು ಗಂಗಾತೀರದಲ್ಲಿ ಜಲಕ್ರೀಡೆ ಮಾಡುತ್ತಿರುವಾಗ ವಾಯುವು ಆ ಕನ್ಯೆಯರಲ್ಲಿ ಮೋಹವುಳ್ಳವನಾದನು. ತನ್ನನ್ನು ವರಿಸುವದಕ್ಕಾಗಿ ವಾಯುವು ಅವರಿಗೆ ಹೇಳಲು, ತಮ್ಮ ತಂದೆಯ ಅಜ್ಞೆಯಿಲ್ಲದೆ ಈ ಕಾರ್ಯವನ್ನು ಮಾಡಲಾರೆವೆಂದು ಆ ಕನ್ಯೆಯರು ಅವನಿಗೆ ತಿಳಿಸಿದರು. ಆಗ ವಾಯುವು ಅತ್ಯಂತ ಕ್ಷುಬ್ಧನಾಗಿ ಆ ಕನ್ಯೆಯರೆಲ್ಲರನ್ನೂ ವಕ್ರಾಂಗಿಯರನ್ನಾಗ ಮಾಡಿದನು. ಈ ಸಂಗತಿಯು ಕುಶನಾಭನಿಗೆ ತಿಳಿಯಲು, ಆ ಕನ್ಯೆಯರನ್ನು ಬ್ರಹ್ಮದತ್ತ ಎಂಬ ಋಷಿಗೆ ಲಗ್ನ ಮಾಡಿ ಕೊಟ್ಟನು. ಕುಬ್ಜೆಯರಾದ ತನ್ನ ಪತ್ನಿಯರನ್ನು ಈ ಋಷಿಯು ಸ್ಪರ್ಶ ಮಾಡಲು, ಅವರೆಲ್ಲರೂ ಮೊದಲಿನಂತೆ ಸುರೂಪಿಗಳಾದರು. ಈ ಸ್ಥಳದಲ್ಲಿ ಕನ್ಯೆಯರು ಕುಬ್ಜೆಯರಾದ್ದರಿಂದ ಇದಕ್ಕೆ ಕನ್ಯಕುಬ್ಜವೆಂಬ ಹೆಸರು ಬಂದಿತು.

[ವಾ. ರಾ. ಬಾಲಕಾಂಡ ಸರ್ಗ ೩೨, ಮಹಾಭಾರತ ವನಪರ್ವ ಅ. ೮೦]

ಆಗ ಉತ್ತರಾಪಥದಲ್ಲಿ ಇಂತಹ ದೊಡ್ಡ ನಗರವು ಮತ್ತೊಂದಿರಲಿಲ್ಲ. ಈ ನಗರವು ಗಂಗಾನದಿಯ ಪಶ್ಚಿಮತೀರದಲ್ಲಿರುವದು. ಹರ್ಷವರ್ಧನನಾಳುವಾಗ ಈ ನಗರದ ಉದ್ದಳತೆಯು ಮೂರು ಮೈಲು; ಅಗಲವು ಒಂದು ಮೈಲು ಇತ್ತು. ನಗರದ ಸುತ್ತಲೂ ಭದ್ರವಾದ ಕೋಟೆಯಿದ್ದು, ಆ ಕೋಟೆಯ ಹೊರಮಗ್ಗಲು ಆಳವಾದ ಅಗಳತ ವಿದ್ದಿತು. ರಾಜಧಾನಿಯ ತುಂಬ ಸುಂದರವಾದ ಮಂದಿರಗಳಿದ್ದು, ಆ ಪಟ್ಟಣದ ಒಳಗೂ ಹೊರಗೂ ಉದ್ಯಾನೋಪವನಗಳೂ, ತಟಾಕ ಪುಷ್ಕರಣಿಗಳೂ ಕಂಗೊಳಿಸುತ್ತಿದ್ದವು. ಕನ್ಯಕುಬ್ಜರಾಜ್ಯದಲ್ಲಿ ಫಲ ಪುಷ್ಪಗಳು ಸಮೃದ್ಧಿಯಾಗಿದ್ದವು. ಆಗ ಪರದೇಶದವರೊಡನೆ ವ್ಯವಹಾರವಿದ್ದುದರಿಂದ, ಇಲ್ಲಿಯ ಅನೇಕ ಜಿನಸುಗಳು ಅನ್ಯ ದೇಶಗಳಿಗೆ ಹೋಗುತಲಿದ್ದವು; ಅನ್ಯದೇಶಗಳಿಂದಾದರೂ ಅನೇಕ ಜಿನಸುಗಳು ಬರುತ್ತಿದ್ದವು. ಈ ರಾಜ್ಯದೊಳಗಿನ ಜನರು ವಿದ್ಯಾವ್ಯಸನಿಗಳೂ, ಪ್ರಾಮಾಣಿಕರೂ ಆಗಿದ್ದರು. ದೇಶದೊಳಗಿನ ಜನರು ಬಹುತರವಾಗಿ ರೇಶಿಮೆಯ ವಸ್ತ್ರವನ್ನು ಉಪಯೋಗಿಸುತ್ತಿದ್ದರು. ಅವರಲ್ಲಿ ಅರ್ಧ ಜನರು ಬೌದ್ಧರು. ಉಳಿದವರೆಲ್ಲ ವೈದಿಕ ಧರ್ಮಾನುಯಾಯಿಗಳು. ಕನ್ಯಕುಬ್ಜರಾಜ್ಯದಲ್ಲಿ ಹತ್ತುಸಾವಿರ ಬುದ್ಧಭಿಕ್ಷುಗಳಿದ್ದರು. ರಾಜಧಾನಿಯಲ್ಲಿ ಹಿಂದುಗಳ ಎರಡುನೂರು ದೇವಾಲಯಗಳಿದ್ದವು. ಈ ಪಟ್ಟಣಕ್ಕೆ ಮೊದಲು ಕುಸುಮಪುರವೆನ್ನುತ್ತಿದ್ದರು.

ಹರ್ಷವರ್ಧನನು ಓಲಗದಲ್ಲಿ ಕುಳಿತಿದ್ದನು. ದಕ್ಷಿಣಾಪಥೇಶ್ವರನಾದ ಸತ್ಯಾಶ್ರಯಪುಲಿಕೇಶಿಯ ಸಂದೇಶವನ್ನು ತೆಗೆದುಕೊಂಡು ಗಜಸೇನಾನಾಯಕನಾದ ಸ್ಕಂದಗುಪ್ತನು ಆಗಮಿಸಿದ್ದನು. ಅವನಿಂದ ಕರ್ನಾಟಕ ಸಮ್ರಾಟನ ಕಡೆಯ ವಾರ್ತೆಯನ್ನು ತಿಳಿದುಕೊಳ್ಳುವದಕ್ಕಾಗಿ ಅಂದು ಸಭೆಯು ನೆರೆಯಿಸಲ್ಪಟ್ಟಿತ್ತು. ರಾಜಸಂಬಂಧಿಕನಾದ ಭಂಡಿಯು ಅಂದಿನ ಸಭೆಗೆ ಆಗಮಿಸಿದ್ದನು. ಮಂತ್ರಿಗಳಾದ ಭಾನಿ-ಈಶ್ವರದಾಸರೂ, ಸೇನಾಪತಿಯಾದ ಸಿಂಹನಾದನೂ ತಮ್ಮ

* ಹುವೆನ್‌ತ್ಸಾಂಗನ ಹರ್ಷಚರಿತ.

ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಹರ್ಷವರ್ಧನನ ಬಂಧುವಾದ ಕೃಷ್ಣ ರಾಜನು ಸಿಂಹಾಸನದ ಬಳಿಯಲ್ಲಿಯೇ ಇದ್ದ ಒಂದು ರತ್ನಖಚಿತ ಸುವರ್ಣಾಸನದ ಮೇಲೆ ವಿರಾಜಮಾನನಾಗಿದ್ದನು. ಆಗ ಹರ್ಷ ವರ್ಧನನು ಸ್ಕಂದಗುಪ್ತನನ್ನು ಕುರಿತು:—

"ಸೇನಾಪತಿಗಳೆ, ಪುಲಿಕೇಶಿ ಮಹಾರಾಜನು ಉತ್ತರಾಪಥದ ಸಂದೇಶಕ್ಕೆ ಮಾನ್ಯತೆ ಕೊಟ್ಟನೆ? ಧೋರಣೆಗಳೂ, ಚತುರರೂ ಆದ ನೀವು ಕಾರ್ಯ ಸಿದ್ಧಿ ಮಾಡಿಕೊಂಡೇ ಬಂದಿರಬಹುದೆಂದು ನನ್ನ ನಂಬಿಗೆಯಿರುವದು."

"ಸಾರ್ವಭೌಮರೆ, ಪುಲಿಕೇಶಿ ರಾಜನೆದುರಿಗೆ ನನ್ನ ಚತುರ ತನವೂ, ಧೂರ್ತತನವೂ ತಿಲಾಂಶವಾದರೂ ನಡೆಯುಲಿಲ್ಲ. ಆ ಕರ್ನಾ ಟಕಸಮ್ರಾಟನು ಅತ್ಯಂತ ವಿಕ್ರಮಶಾಲಿಯಿರುವನು. ಯುದ್ಧವೆಂದರೆ ಅವನ ಬಾಹುಗಳು ಸ್ಫುರಣ ಹೊಂದುತ್ತವೆ. ಕರ್ನಾಟಕ ಸಾಮ್ರಾ ಜ್ಯವು ನರ್ಮದೆಯ ವರೆಗೆ ಇರುವದೆಂದೂ, ರೇವಾನದಿಯ ದಕ್ಷಿಣ ದಲ್ಲಿ ಒಂದು ಪಾದದಷ್ಟು ಭೂಮಿಯನ್ನಾದರೂ ಗುಪ್ತಸಾರ್ವಭೌ ಮರ ವಶದಲ್ಲಿ ಕೊಡುವದಕ್ಕೆ ತಾನು ಸಿದ್ಧನಿಲ್ಲವೆಂದೂ ಅವನು ನಿಷ್ಠುರವಾಗಿ ಹೇಳಿದನು. ಸಾಮ-ಭೇದಗಳಿಂದ ಅವನು ತನ್ನ ಚಂಡಿತನವನ್ನು ಬಿಡಲಿಲ್ಲ. ಇನ್ನು ದಂಡೋಪಾಯವೇ ಕಡೆಯ ಪ್ರಯತ್ನವು! ಅವನ ಮಂತ್ರಿ-ಸೇನಾನಾಯಕರು ಅತ್ಯಂತ ಸ್ವಾಭಿಮಾ ನಿಗಳಿರುವರು. ಕನ್ನಡಿಗ ದಂಡಾಳುಗಳು ರಣೋತ್ಸಾಹಿಗಳಿರುವರು. ಪುಲಿಕೇಶಿ ಮಹಾರಾಜನು ತನ್ನ ಸ್ವಾಮಿನಿಷ್ಠ ಪಡೆಯ ಸಹಾಯ ದಿಂದ ಬಹುತರವಾಗಿ ಎಲ್ಲ ದಕ್ಷಿಣಾಪಥವನ್ನು ಸ್ವಾಧೀನದಲ್ಲಿರಿಸಿ ಕೊಂಡಿರುವನು. ವಾತಾಪಿಪುರ ರಾಜಧಾನಿಯನ್ನು ನೋಡಿದರೆ, ಅವನ ಸಾಮ್ರಾಜ್ಯವೈಭವವು ಎಷ್ಟಿರುವದೆಂಬದು ಗೊತ್ತಾಗುವದು. ತ್ರೈಲೋಕ್ಯಸತ್ವವನ್ನು ತೃಣೀಕರಿಸುವ ಆ ಕ್ಷತ್ರ ಸಾರ್ವಭೌಮನ ವೀರಕನ್ನಡಿಗರ ಸೈನ್ಯವು ಸ್ವರ್ಗದ ಮೇಲೆ ದಾಳಿ ಮಾಡುವಷ್ಟು ಬಲಾಢ್ಯವಿರುವದು. ಉತ್ತರಾಪಥದ ಸಮ್ರಾಟರಾದ ನೀವು ಅವ

ನಿಗೆ ಕಃಪದಾರ್ಥವಾಗಿ ಕಾಣತೊಡಗಿರುವಿರಿ. ನಿದಾಕ್ಷಿಣ್ಯದಿಂದ ಹೇಳಬೇಕಾದರೆ, ಅವನೊಡನೆ ಕಾದಿ ಜಯ ಸಂಪಾದನೆ ಮಾಡುವೆವೆಂದು ಯಾರಾದರೂ ಯತ್ನಿಸುತ್ತಿದ್ದರೆ, ಅವರಂತಹ ಅದೂರದರ್ಶಿಗಳು ಅವರೇ! ಮಹಾರಾಜರೆ, ಕಾಲು ಕೆದರಿ ನ್ಯಾಯ ತೆಗೆದು ಲಾಭ ಪಡೆಯುವಂತಹ ಸ್ಥಳವು ಅದಲ್ಲ ತಾವು ಎಷ್ಟೋ ಬಲಾಢ್ಯರಿದ್ದರೂ, ತಮ್ಮ ಸೈನಿಕರು ಎಷ್ಟೇ ಕೆಚ್ಚೆದೆಯವರಿದ್ದರೂ, ತಮ್ಮ ಗಜಸೈನ್ಯವೂ, ಅಶ್ವದಳವೂ, ಕಾಲಾಳುಗಳೂ ಎಷ್ಟೇ ದೊಡ್ಡದಿದ್ದರೂ ಅವನೊಡನೆ ಕಾದಿ ವಿಜಯ ಸಂಪಾದನೆ ಮಾಡಿಕೊಳ್ಳುವೆವೆಂದು ತಿಳಿದುಕೊಳ್ಳುವದು ಅತ್ಯಂತ ಮೂರ್ಖತನವಾಗಿರುವದು. ನಾವು ಕರ್ಣೋಪಕರ್ಣವಾಗಿ ಅವನ ಪರಾಕ್ರಮದ ಖ್ಯಾತಿಯನ್ನು ಎಷ್ಟು ಕೇಳಿರುವೆವೋ, ಅದಕ್ಕಿಂತ ನೂರಾರು ಪಾಲು ಹೆಚ್ಚಿನ ಸ್ಥಿತಿಯು ಪ್ರತ್ಯಕ್ಷ ನೋಡುವಿಕೆಯಲ್ಲಿ ಕಂಡು ಬರುವದು ಉತ್ತರಾಪಥದೊಡನೆ ಸಡ್ಡು ಹೊಡೆದು ನಿಲ್ಲುವದಕ್ಕೆ ದಕ್ಷಿಣಾಪಥೇಶ್ವರನು ಸ್ವಲ್ಪ ಮಾತ್ರವಾದರೂ ಹಿಂಜರಿಯುವದಿಲ್ಲ ನಮ್ಮಿಂದ ತಿಲಾಂಶವಾದರೂ ಅನ್ಯಾಯವು ಘಟಿಸಿದರೆ, ಅದನ್ನು ಸಹಿಸುವಂತಹ ಸಹಿಷ್ಣುತೆಯೂ ಅವನಲ್ಲಿರುವದಿಲ್ಲ ವೀರಸೇನ, ಪ್ರತಾಪವರ್ಮ ಮೊದಲಾದ ಮಂತ್ರಿ ಸೇನಾನಾಯಕರು ಅವನಿಗಿಂತಲೂ ಉಗ್ರರಿರುವರು. ಅವರಿಗಿಂತ ಪುಲಿಕೇಶಿರಾಜನು ಸಾವಿರ ಪಾಲು ಸಾತ್ವಿಕನೆನ್ನುವದರಲ್ಲಿ ಸಂದೇಹವಿಲ್ಲ. ಅವರು ಸಂಧಾನಕ್ಕಾಗಿ ಹೋಗಿದ್ದ ನನ್ನನ್ನು ಬಂಧನೆಯಲ್ಲಿರಿಸಬೇಕೆಂಬ ವಿಚಾರದಲ್ಲಿದ್ದಂತೆ ನನಗೆ ಭಾಸವಾಗಿತ್ತು; ಆದರೆ ಪುಲಿಕೇಶಿಯು ಮಹಾನುಭಾವನಿದ್ದುದರಿಂದಲೆ ನಾನು ಸುರಕ್ಷಿತವಾಗಿ ಹೊರಟು ಬಂದು ನಿಮ್ಮ ಚರಣ ದರ್ಶನ ಹೊಂದಿದೆನು''

ಸ್ಕಂದಗುಪ್ತನು ಹೀಗೆ ನುಡಿದು, ತನ್ನ ಬಳಿಯಲ್ಲಿದ್ದ ಪುಲಿಕೇಶಿಯ ಪತ್ರವನ್ನು ಹರ್ಷವರ್ಧನನ ಸ್ವಾಧೀನ ಮಾಡಿ:—'ಮಹಾರಾಜರೆ, ಈ ಪತ್ರವನ್ನೋದಿದರೆ ಆ ಕನ್ನಡ ರಾಜನ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯುವದು' ಎಂದು ನುಡಿದ ಕೂಡಲೆ, ಹರ್ಷವರ್ಧ

ನನು ಆ ಪತ್ರವನ್ನೋದುವದಕ್ಕಾಗಿ ಅದನ್ನು ಮಂತ್ರಿಯಾದ ಈಶ್ವರ ದಾಸನ ಸ್ವಾಧೀನ ಮಾಡಿ, ಸ್ಕಂದಗುಪ್ತನನ್ನು ಕುರಿತು ತಿರಸ್ಕಾರ ವ್ಯಂಜಕಧ್ವನಿಯಿಂದ:—

"ಸೇನಾಪತಿಗಳೆ, ನೀವು ಪುಲಿಕೇಶಿಗೆ ಬಹಳವಾಗಿ ಅಂಜಿದಂತೆ ತೋರುವದು. ಅವನು ಶೂರನಿರುವನೆಂಬದರಲ್ಲಿ ಸಂದೇಹವಿಲ್ಲ; ಅವನ ದಂಡಾಳುಗಳಾದರೂ ಸುರಿತರಿರುವರೆಂಬದರಲ್ಲಿ ವಾದವಿಲ್ಲ; ಆದರೆ ನೀವು ವರ್ಣಿಸಿದಷ್ಟು ಘನತೆಗೆ ಮಾತ್ರ ಅವನು ಪಾತ್ರನಲ್ಲ ವೆಂದು ನನ್ನ ಮನವರಿಕೆಯಾಗಿದೆ. ನೀವು ಸವಿಗಾರನಾದ ಕರ್ನಾಟಕ ರಾಜನ ರುಚಿಕರವಾದ ಮಾತಿಗೆ ಮರುಳಾದಂತೆ ತೋರುವದು. ಆ ಧೂರ್ತನು ಪೊಳ್ಳು ಬೆದರಿಕೆಯಿಂದ ನಿಮ್ಮನ್ನು ಅತಿಶಯವಾಗಿ ಅಂಜಿಸಿರುವದರಿಂದ ನಿಮ್ಮ ಮನಃಸ್ಥಿತಿಯು ಹೀಗಾಗಿರುವದು. ದಕ್ಷಿಣದಲ್ಲಿ ಪಲ್ಲವರಾಜನಾದ ಮಹೇಂದ್ರವರ್ಮನನ್ನು ಬಿಟ್ಟರೆ, ಪ್ರಬಲರಾದ ಮಾಂಡಲಿಕರು ಯಾರಿರುವರು? ಹೇಡಿಗಳ ಮೇಲೆ ವರ್ಚಸ್ಸವನ್ನು ಪ್ರಸ್ಥಾಪಿಸುವದು ದೊಡ್ಡ ಮಾತಲ್ಲ. ಏನಕೇನ ಪ್ರಕಾರೇಣ ಖ್ಯಾತಿಯನ್ನು ಪಡೆದ ಪುಲಿಕೇಶಿಯ ಬಾಷ್ಕಳ ಮಾತುಗಳಿಗೆ ನಿಮ್ಮಂತಹ ನಾಮಾಂಕಿತ ಯೋಧರು ಬೆದರಿದ್ದನ್ನು ನೋಡಿ ನನಗೆ ಪರಮಾಶ್ಚರ್ಯವಾಗಿದೆ ದಕ್ಷಿಣದ ಮಾಂಡಲಿಕರು ಅಳ್ಳೆದೆಯವರಿರುವದರಿಂದಲೇ ಅವರನ್ನು ಪುಲಿಕೇಶಿಯು ಅಂಕಿತದಲ್ಲಿಟ್ಟುಕೊಂಡು ಸಾರ್ವಭೌಮನೆನಿಸಿಕೊಳ್ಳತೊಡಗಿರುವನು. ನೀವು ಅವನ ಆಡಂಬರಕ್ಕೆ ಬಹಳವಾಗಿ ಅಂಜಿರುವಿರಿ. ಅವನ ಆಟವು ವಿಕ್ರಮಶಾಲಿಯಾದ ಉತ್ತರಾಪಥದ ಸಮ್ರಾಟನೆದುರಿಗೆ ನಡೆಯುವದೇ? ಇಂದು ಅವನು ನರ್ಮದೆಯ ವರೆಗೆ ಸಾಗಿ ಬಂದಿದ್ದರೆ ನಾಳೆ ಭಾಗೀರಥಿಯ ವರೆಗೆ ತನ್ನ ಅಧಿಪತ್ಯವನ್ನು ನೆಲೆಗೊಳಿಸಲು ಯತ್ನಿಸತಕ್ಕವನೇ! ನಾವು ಅವನೊಡನೆ ಬಡಿದಾಡಿ ಗೋದಾವರಿಯ ವರೆಗೆ ನಮ್ಮ ಸಾಮ್ರಾಜ್ಯವನ್ನು ನೆಲೆಗೊಳಿಸಿದರೇನೇ ಗುಪ್ತಸಿಂಹಾಸನದ ಗೌರವವು ಉಳಿಯುವದು" ಎಂದು ಹರ್ಷವರ್ಧನನು ಆವೇಶದಿಂದ ನುಡಿದು:—ಈಶ್ವರ

ದಾಸರೇ, ಪತ್ರದೊಳಗಿನ ಸಂಗತಿಯೇನಿರುವದು?

ಹರ್ಷವರ್ಧನನು ಹೀಗೆ ಕೇಳಿದ ಕೂಡಲೆ, ಅವನ ಮಂತ್ರಿಯಾದ ಈಶ್ವರದಾಸನು ಸತ್ಯಾಶ್ರಯಪುಲಿಕೇಶಿಯ ಪತ್ರವನ್ನು ಓದಲಾರಂಭಿಸಿದನು: "ಪರಾಕ್ರಮದ ಗರ್ವದಿಂದ ಅನ್ಯಾಕ್ರಾಂತಮಾಡುವದಕ್ಕೆ ಯತ್ನಿಸಿದರೆ ಅದರ ಪರಿಣಾಮವು ಹಿತಕರವಾಗಲಾರದೆಂದೂ, ರಾಕ್ಷಸೀ ರಾಜ್ಯತೃಷ್ಣೆಯು ಎಂದೂ ತಾರಕವಾಗಲಾರದಾದ್ದರಿಂದ ಪಿತ್ರಾರ್ಜಿತ ಸ್ವತ್ತನ್ನಷ್ಟೇ ಕಾಯ್ದುಕೊಂಡು ಕಾಲಹರಣ ಮಾಡಬೇಕೆಂದೂ" ಪುಲಿಕೇಶಿಯು ಆ ಪತ್ರದಲ್ಲಿ ಹರ್ಷವರ್ಧನನಿಗೆ ಉಪದೇಶಿಸಿದ್ದನು. ನಿಷ್ಕಾರಣವಾಗಿ ಯುದ್ಧಕ್ಕೆ ಅಣಿಯಾದರೆ, ಕನ್ನಡ ಸಮ್ರಾಟನು ಕೈಗೊಡಲಿಕ್ಕೆ ಸಿದ್ಧನಿರುವನೆಂಬದನ್ನಾದರೂ ಅವನು ಬರೆದು ತಿಳಿಸಿದ್ದನು. ಈಶ್ವರದಾಸನು ಪತ್ರವನ್ನೋದಿದ ಕೂಡಲೆ ಭಾನಿ-ಭಂಡಿ-ಸಿಂಹನಾದ ಮೊದಲಾದ ಜನರು ಪುಲಿಕೇಶಿಯ ವಿಷಯಕ್ಕೆ ಕ್ರೋಧಗೊಂಡರು. ಅವನು ಉನ್ಮತ್ತನಿರುವನೆಂದು ಆ ಜನರ ತಿಳುವಳಿಕೆಯಾಯಿತು. ಹರ್ಷವರ್ಧನನಂತೂ ಸಂತಾಪದಿಂದ ಉರಿಯತೊಡಗಿದನು. ದಕ್ಷಿಣಾಪಥದ ಸಾರ್ವಭೌಮನೆಂಬ ಕೊಬ್ಬಿನಿಂದ ಮೆರೆಯುವ ಪುಲಿಕೇಶಿಯ ಹಿಗರೆಷ್ಟಿರುವದೆಂಬದನ್ನು ಒಮ್ಮೆ ನೋಡಿಯೇ ಬಿಡಬೇಕೆಂದು ಅವರು ನಿಶ್ಚಯಿಸಿದರು. ಪುಲಿಕೇಶಿಯ ಬಿರುಸು ಬರಹದಿಂದ ಸಿಟ್ಟಿದ್ದ ಹುಚ್ಚಾದ ಸಿಂಹನಾದ ಸೇನಾಪತಿಯು ಸಿಂಹನಾದ ಮಾಡುತ್ತ:—

"ಸಾರ್ವಭೌಮರೆ, ಉತ್ತರದವರ ಕೈಯನ್ನು ಆ ಉನ್ಮತ್ತ ರಾಜನಿಗೆ ತೋರಿಸಲಿಕ್ಕೇ ಬೇಕು. ಅವನಲ್ಲಿ ವಿನಯವು ತಿಲಾಂಶವಾದರೂ ಇದ್ದಂತೆ ಕಾಣುವದಿಲ್ಲ. ನಾವೀಗ ಸುಮ್ಮನೆ ಕುಳಿತರೆ, ನಮ್ಮನ್ನು ಹೇಡಿಗಳೆಂದು ಅವನು ಭಾವಿಸಬಹುದು. ಇಷ್ಟು ದಿನಗಳ ವರೆಗೆ ನಮ್ಮ ಮಾಂಡಲಿಕರಾಗಿದ್ದ ಅರಸರಿಂದ ಅವನು ಕಪ್ಪ-ಕಾಣಿಕೆಗಳನ್ನು ತೆಗೆದುಕೊಳ್ಳಗೊಡಗಿರುವನು. ಅವನು ಈ ಬಗೆಯಾಗಿ ಗರ್ವಿಷ್ಠನಂತೆ ನಡೆಯತೊಡಗಿದ್ದನ್ನು ನೋಡಿ ನಾವು ಸಹಿಸ

ಬೇಕೇನು? ಪುಲಿಕೇಶಿಯು ನಮ್ಮ ಆಪ್ತನಿರುವದೂ ಅಷ್ಟರಲ್ಲಿಯೇ ಇರುವದು. ಅವನ ಉದ್ಧಾಮತನಕ್ಕೆ ಯೋಗ್ಯ ಪ್ರಾಯಶ್ಚಿತ್ತವೀಯದೆ ದೊಡ್ಡ ಮನಸ್ಸಿನಿಂದ ಕ್ಷಮಿಸಿದರೆ, ಅಪಾತ್ರಕ್ಷಮಾದಾನದ ಬಗ್ಗೆ ನಾವು ಪಶ್ಚಾತ್ತಾಪಪಡಬೇಕಾಗುವದೆಂದು ನಾನು ನಿಶ್ಚಿತವಾಗಿ ಹೇಳುವೆನು."

ಸಿಂಹನಾದನು ಹೀಗೆ ನುಡಿದ ಕೂಡಲೆ ಸ್ಕಂದಗುಪ್ತನು ನಸುನಕ್ಕನು. ಪುಲಿಕೇಶಿಯನ್ನು, ಅವನ ಸೇನಾಪತಿಗಳನ್ನು, ಸೈನ್ಯವನ್ನೂ ಪ್ರತ್ಯಕ್ಷ ನೋಡಿದ್ದರಿಂದ ಅವನು ಹೀಗೆ ಉತ್ಕಟಪೌರುಷದ ಮಾತುಗಳನ್ನಾಡುವನೆಂದು ಸ್ಕಂದಗುಪ್ತನು ತಿಳಿದನು. ಆಗ ಅವನು ಹರ್ಷವರ್ಧನನನ್ನು ಕುರಿತು:—

"ಮಹಾರಾಜರೆ, ಸಿಂಹನಾದರ ಮಾತುಗಳು ಅವರಿಗೆ ಮಾತ್ರ ಯೋಗ್ಯವಾಗಿ ಕಾಣುತ್ತಿರಬಹುದು. ಪ್ರತ್ಯಕ್ಷವಾಗಿ ಪುಲಿಕೇಶಿಯನ್ನು ಕಂಡರೆ ಅವನ ಪರಾಕ್ರಮದ ಅನುಭವವು ತಿಳಿಯುವದು. ನಾನು ಅವನಿಗೆ ಅಂಜಿದಾಗಲಿ, ಯುದ್ಧಯಾತ್ರೆಗೆ ಹಿಂಜರಿದಾಗಲಿ ಹೀಗೆ ಮಾತನಾಡುವೆನೆಂದು ಯಾರೂ ಭಾವಿಸಕೂಡದು. ಯುದ್ಧ ಮಾಡದಿದ್ದರೆ ಗತ್ಯಂತರವಿಲ್ಲವೆಂಬ ಪ್ರಸಂಗವೊದಗುವ ವರೆಗೆ ನಾವು ತಟಸ್ಥರಾಗಿರತಕ್ಕದ್ದು. ಅವನಲ್ಲಿ ಯಾವ ಅಪರಾಧವಿರುವದೆಂದು ನಾವು ದಂಡಯಾತ್ರೆಗಾಗಿ ಹೊರಡಬೇಕು? ಬಲಾಢ್ಯನಾದ ಪ್ರತಿಸ್ಪರ್ಧಿಯೊಡನೆ ಕಾದಿ ಜಯ ಸಂಪಾದನೆ ಮಾಡಿಕೊಳ್ಳಬೇಕಾದರೆ, ಅಸಂಖ್ಯ ಪ್ರಾಣಹಾನಿಯಾಗುವದು. ನಾವು ಅಂತಹ ಅನರ್ಥವನ್ನೊದಗಿಸಿಕೊಳ್ಳುವ ಉಸಾಬರಿಗೆ ನಿಷ್ಕಾರಣವಾಗಿ ಹೋಗುವದೇಕೆ? ಉತ್ತರಾಪಥದ ಸಾಮ್ರಾಜ್ಯವು ನರ್ಮದೆಯ ವರೆಗೆ ಮಾತ್ರ ಇರುವದೆಂಬದು ಸರ್ವಶ್ರುತವಾದ ಮಾತಾಗಿರುವದು. ದಕ್ಷಿಣಾಪಥದ ಸಿಂಹಾಸನದಲ್ಲಿ ಪುಲಿಕೇಶಿಯು ಅಧಿಷ್ಠಿತನಾಗಿರುವವರೆಗೆ ಸಾಮ್ರಾಜ್ಯವಿಸ್ತಾರ ಮಾಡುವದು ಹಾನಿಕರವೆಂದು ನನ್ನ ಅಲ್ಪಮತಿಗೆ ತೋರಲಾರಂಭಿಸಿದೆ. ಇದರ ಮೇಲೆ ಮಹಾರಾಜರ ಇಚ್ಛೆಯಿದ್ದಂತಾಗಲಿ."

ಸ್ಕಂದಗುಪ್ತನು ಹೀಗೆ ನುಡಿದ ಕೂಡಲೆ ಭಂಡಿಯು ನಗುತ್ತ: "ಹಸ್ತಿಸೇನಾಪತಿಗಳು ಪುಲಿಕೇಶಿಗೆ ಬಹಳವಾಗಿ ಅಂಜಿದಂತೆ ತೋರುವದು. ಸತ್ವಶಾಲಿಗಳಾದ ಸಾರ್ವಭೌಮರು ರಾಜ್ಯವಿಸ್ತಾರ ಮಾಡದೆ ನೊಣ ಬಡಿಯುತ್ತ ಕುಳಿತುಕೊಳ್ಳುವದೆಂದರೆ, ತೀರ ಅಪ್ರಶಸ್ತವಾದ ಮಾತಾಗಿರುವದು ಉತ್ತರಾಪಥದ ಸೀಮಾಂತವು ನರ್ಮದೆಯವರೆಗೆ ಇದ್ದರೇನಾಯಿತು? ಬಾಹುಬಲದಿಂದ ಹೆಚ್ಚಿನ ರಾಜ್ಯವನ್ನು ಸಂಪಾದನೆ ಮಾಡದಿದ್ದರೆ, ಬಳಿಯಲ್ಲಿ ಅಪರಿಮಿತ ಸೇನಾಸಂಗ್ರಹ ಮಾಡಿದ್ದರ ಸಾರ್ಥಕವೇನಾಗುವದು?"

ಭಂಡಿಯು ಹೀಗೆ ಹೇಳುತ್ತಿರಲು, ಒಬ್ಬ ಗುಪ್ತಚರನು ಒಲಗವನ್ನು ಪ್ರವೇಶಿಸಿ, ಹರ್ಷವರ್ಧನನಿಗೆ ವಂದನೆಗಳನ್ನರ್ಪಿಸಿ: "ಮಹಾರಾಜರೆ, ವಲ್ಲಭಿಯ ರಾಜನಾದ ಧ್ರುವಸೇನನು ಸ್ವತಂತ್ರನಾಗಬೇಕೆಂದು ಹವಣಿಸುತಲಿರುವನು. ಅವನು ಮುಂದೆ ತಮಗೆ ಕಪ್ಪ-ಕಾಣಿಕೆಗಳನ್ನು ಕೊಡಬಾರದೆಂದು ನಿಶ್ಚಯಿಸಿರುವನು. ಈಗ ಅವನು ಸೈನ್ಯಸಿದ್ಧತೆ ಮಾಡಿಕೊಳ್ಳತೊಡಗಿದ್ದು, ಯುದ್ಧಪ್ರಸಂಗವೊದಗಿದರೆ, ಭಡೋಚದ ಅರಸನಾದ ದದ್ದರಾಜನಿಗೆ ಸಹಾಯ ಮಾಡುವಂತೆ ತಿಳಿಸಿರುವನು ದದ್ದರಾಜನಿಗೆ ದಕ್ಷಿಣಾಪಥದ ಸಮ್ರಾಟನಾದ ಪುಲಿಕೇಶಿಯ ಸಹಾಯವಿರುವದೆಂದು ತಿಳಿದಿರುವದು. ನೀವು ಭಡೋಚರಾಜನನ್ನಾಗಲಿ ಧ್ರುವಸೇನನನ್ನಾಗಲಿ ಕಾಣಿಕೆಯ ಬಗ್ಗೆ ತೊಂದರೆಗೊಳಿಸಿದರೆ, ಕರ್ನಾಟಕ ಸಾರ್ವಭೌಮನು ಸಸೈನ್ಯವಾಗಿ ಉತ್ತರಾಪಥದ ಮೇಲೆ ಸಾಗಿ ಬರುವನೆಂದು ವಿಶ್ವಸನೀಯವಾದ ಸಂಗತಿಯು ತಿಳಿದದ್ದರಿಂದ ಈ ವಾರ್ತೆಯನ್ನರುಹುವದಕ್ಕಾಗಿ ಧಾವಿಸಿ ಬಂದೆನು. ಪ್ರಭುಚಿತ್ತಕ್ಕೆ ಅರಿಕೆಯಿರಬೇಕು"

ಗುಪ್ತಚರನು ಹೀಗೆ ನುಡಿದ ಕೂಡಲೆ ಹರ್ಷವರ್ಧನನ ಸಂತಾಪವು ಜಾಗ್ರತವಾಯಿತು. ಅವನು ಧ್ರುವಸೇನ-ದದ್ದರಾಜರ ಮೇಲೆ ಬೆಂಕಿಯನ್ನು ಕಾರತೊಡಗಿದನು. ತನ್ನ ಮಾಂಡಲಿಕರಾದ ಅವರಿಗೆ ಸಹಾಯ ಮಾಡಿ, ಸಾಮ್ರಾಜ್ಯದಲ್ಲಿ ಒಡಕು ಹುಟ್ಟಿಸಲಿಕ್ಕೆ ಪ್ರವೃತ್ತ

ನಾದ ಪುಲಿಕೇಶಿಯ ಗರ್ವಖಂಡನೆಯನ್ನು ಮಾಡಬೇಕೆಂದು ಅವನು ಸಂಕಲ್ಪ ಮಾಡಿಕೊಂಡನು. ಆಗ ಅವನು ಸ್ಕಂದಗುಪ್ತನನ್ನು ಕುರಿತು: "ಸೇನಾಪತಿಗಳೆ, ನೋಡಿದಿರಾ, ಪುಲಿಕೇಶಿಯ ಗೃಹಭೇದಿತನವನ್ನು? ತನ್ನ ಯೋಗ್ಯತೆಯೇನು? ತನ್ನ ಶಕ್ತಿಯೇನು? ಹುಲ್ಲಿಯು ಹುಲಿಯನ್ನು ಕೆಣಕಿದಂತಾಯಿತು. ನೀವು ಅವನನ್ನು ಬಹು ಸರಿಯಾಗಿ ವರ್ಣಿಸುತ್ತಿದ್ದಿರಲ್ಲವೆ? ಈಗಾದರೂ ತಿಳಿಯಿತೇ, ಆ ಮದಾಂಧನ ದುರ್ವರ್ತನವು? ಈಗಲಾದರೂ ಯುದ್ಧಯಾತ್ರೆಗೆ ಸಿದ್ಧವಾಗಬೇಕೆನ್ನುವಿರೊ-ಹೇಗೆ? ಪ್ರತಿಸ್ಪರ್ಧಿಯಾದ ಅರಸನನ್ನು ತಲೆಯೆತ್ತಗೊಡಬಾರದು. ನೀವು ಶೂರರಿರುವಿರಿ. ಆ ಶೂರತನಕ್ಕೆ ಸರಿಯಾದ ರಾಜಕಾರಣಧುರೀಣರು ಮಾತ್ರ ನೀವಿರುವದಿಲ್ಲ. ಇನ್ನು ನೀವು ಯಾವ ವಿಧದಿಂದಲೂ ಸಂದೇಹಗೊಳ್ಳದೆ ಗಜಸೈನ್ಯವನ್ನು ಬೇಗನೆ ಸಿದ್ಧಪಡಿಸಿರಿ ಸಿಂಹನಾದರೆ, ನಿಮ್ಮ ಕಾಲಾಳುಗಳ ಹಾಗು ಅಶ್ವದಳದ ಸಿದ್ಧತೆಯು ಉತ್ತಮವಾದ ರೀತಿಯಿಂದ ನಡೆಯಲಿ. ಇನ್ನು ಎಂಟು-ಹತ್ತು ದಿವಸಗಳಲ್ಲಿ ಕರ್ನಾಟಕದ ಮೇಲೆ ಸಾಗಿ ಹೋಗಲಿಕ್ಕೆ ಬೇಕು ದಿನಾವಧಿ ಮಾಡಿದರೆ, ನಾವೇ ನಮ್ಮ ಹಾನಿ ಮಾಡಿಕೊಂಡಂತಾಗುವದು"

"ಮಹಾರಾಜರೆ, ನನ್ನನ್ನು ಅಂಜುಬುರುಕನೆಂದು ನೀವು ತಿಳಿದುಕೊಂಡಿರುವಿರಿ ಯುದ್ಧಕ್ಕಾಗಿ ನನ್ನ ಬಾಹುಗಳು ಸದೈವ ಸ್ಫುರಣ ಹೊಂದುತಲಿರುವವು. ತಮ್ಮ ಆಜ್ಞೆಯು ನನಗೆ ಶಿರಸಾವಾನ್ಯವಿರುವದು ಇನ್ನು ನಾನು ವಿನಂತಿ ಮಾಡಿಕೊಳ್ಳುವದೇನಂದರೆ, ಕರ್ನಾಟಕ ಸಾರ್ವಭೌಮನು ಬಲಾಢ್ಯನಿರುವನು; ಅದ್ದರಿಂದ ಸೇನಾ ಸಿದ್ಧತೆಯನ್ನು ಚನ್ನಾಗಿ ಮಾಡಿಕೊಂಡೇ ದಂಡಯಾತ್ರೆಗಾಗಿ ಹೊರಡತಕ್ಕದ್ದು."

ಸ್ಕಂದಗುಪ್ತನು ಹೀಗೆ ಹೇಳಿದ ಮೇಲೆ, ಒಂದು ತಿಂಗಳ ಅವಧಿಯಲ್ಲಿ ಸೈನ್ಯವನ್ನು ಸಿದ್ಧಪಡಿಸಿಕೊಳ್ಳಬೇಕೆಂದು ಹರ್ಷವರ್ಧನನು ಎಲ್ಲ ಸರದಾರ-ಸೇನಾಪತಿಗಳಿಗೆ ಹೇಳಿದನು.

ಪುಲಿಕೇಶಿಯ ಮೇಲೆ ದಂಡೆತ್ತಿ ಹೋಗಬೇಕೆಂದು ಹೀಗೆ ಕನ್ಯಕುಬ್ಜದ ಓಲಗದಲ್ಲಿ ನಿರ್ಧರಿಸಲ್ಪಟ್ಟಿತು.

---

## ವೀರ ಕ್ಷತ್ರಿಯರೂ ಅಲ್ಲ, ಶೂರ ಕನ್ನಡಿಗರೂ ಅಲ್ಲ.

"ಮಹಾರಾಣಿಯವರೆ, ಇಂದು ರಾಜಧಾನಿಯಲ್ಲಿ ನೋಡಿದತ್ತ ಬಹಳೇ ಗೊಂದಲವೆದ್ದಿರುವದು. ಜನರು ಯಾವದೋ ಒಂದು ಉತ್ಸವದಲ್ಲಿ ತೊಡಗಿದಂತೆ ಭಾಸವಾಗುತ್ತದೆ. ದೇವಿಯವರೆ, ಪೌರವಾಸಿಗಳು ಯಾವ ಸಮಾರಂಭವನ್ನು ಜರುಗಿಸಬೇಕೆಂದಿರುವರು?"

"ರೇವತಿ, ರಾಜಧಾನಿಯಲ್ಲಿ ನಡೆದ ಗೊಂದಲದ ಗಂಧವಾರ್ತೆಯೂ ನಿನಗೆ ಗೊತ್ತಿಲ್ಲವೇನೆ?"

"ಇಲ್ಲ; ರಾಣಿಯವರೆ, ನನಗೆ ಗೊತ್ತಿಲ್ಲ. ಪುರವಾಸಿಗಳು ಯಾವ ಸಮಾರಂಭವನ್ನು ಮಾಡಬೇಕೆಂದಿರುವರು?"

ವಾತಾಪಿಪುರದ ಸೈನ್ಯವು ನಾಳೆ ಅರುಣೋದಯಕ್ಕೆ ವಿಜಯಯಾತ್ರೆಗಾಗಿ ಹೊರಡುವದಿರುವದು. ಅವರಿಗೆ ಸಮಾರಂಭದೊಡನೆ ನಿರೋಪ ಕೊಡುವದಕ್ಕಾಗಿ ಬೀದಿಗಳು ತಳಿರ್ತೋರಣಗಳಿಂದ ಶಿಂಗರಿಸಲ್ಪಡತೊಡಗಿರುವವು. ಉತ್ತರಾಪಥದ ಮೇಲೆ ದಂಡಯಾತ್ರೆಗೆ ಮಹಾರಾಜರವರು ಹೊರಡುವರೆಂಬ ವಾರ್ತೆಯು ಸಣ್ಣ ಹುಡುಗರಿಗಾದರೂ ಗೊತ್ತಾಗಿರುವದು. ಹೀಗಿರಲು, ನೀನು ಅರಿಯದವಳಂತೆ ನನ್ನನ್ನು ಕೇಳುತ್ತಿರುವದನ್ನು ನೋಡಿ ಆಶ್ಚರ್ಯವೆನಿಸುತ್ತದೆ!"

ನೂತನ ಸಂಸಾರದವಳಾದ ರೇವತಿಯ ಈಗಿನ ಸ್ಥಿತಿಯು ಬೇರೆಯಾಗಿ ಹೋಗಿರುವದು. ಪ್ರಣಯಪಂಕವು ದುರ್ನಿವಾರವಾದದ್ದಿರುವದು. ಕರ್ನಾಟಕ ಸಾಮ್ರಾಜ್ಯದ ತುಂಬ ನಡೆದ ಕೋಲಾಹಲವು ಅವಳ ಕರ್ಣರಂಧ್ರವನ್ನು ಪ್ರವೇಶಿಸಲು ಸಮರ್ಥವಾಗದಿರಲಿಕ್ಕೆ ಅವಳು ಹೊರಗಿನ ಯಾವ ವಿಷಯಗಳ ಕಡೆಗೂ ಲಕ್ಷ್ಯಗೊಡದಿರುವದೇ ಕಾರಣವು. ರೇವತಿ, ಪ್ರಣಯದ ಮಹಿಮೆಯು ಅಗಾಧವಾದದ್ದಿರುವದು!

"ವಿಜಯಾದೇವಿಯವರೆ, ಚೇಷ್ಟೆ ಮಾಡಬೇಡಿರಿ. ಹರ್ಷವರ್ಧನನ ಮೇಲೆ ಮಹಾರಾಜರು ದಂಡೆತ್ತಿ ಹೋಗುವರೆಂಬ ವಾರ್ತೆಯನ್ನು ನಾನು ಕೇಳಿದ್ದೆನು; ಆದರೆ ನಾಳಿನ ದಿನವೇ ಹೊರಡುವರೆಂಬದು ತಿಳಿದಿರಲಿಲ್ಲ."

"ರೇವತಿ, ನಿನ್ನ ಪತಿಯು ದಂಡಯಾತ್ರೆಗೆ ಹೊರಡುವದಿಲ್ಲವೇನು?"

"ಮಹಾರಾಣಿಯವರೆ, ಇದೇನು ಕೇಳುವಿರಿ? ಕರ್ನಾಟಕ ಸಾಮ್ರಾಜ್ಯದ ಮುಖ್ಯ ಸೇನಾಪತಿಗಳ ಪುತ್ರರೂ, ವೀರಾಗ್ರಣಿಗಳೂ ಆದ ನನ್ನ ನಾಥರು ಇಂಥ ಅಪೂರ್ವ ಸಮಯಕ್ಕೆ ಹೊರಡದಿರುವರೆ?"

"ಶಾಂತಿವರ್ಮರು ಯುದ್ಧದ ಸಿದ್ಧತೆಯಲ್ಲಿದ್ದರೆ, ನಿನಗೆ ಆ ಸಂಗತಿಯು ತಿಳಿಯುತ್ತಿದ್ದಿಲ್ಲವೇನು? ಯುದ್ಧವಾರ್ತೆಯು ಗಂಧವೇ ನಿಮ್ಮೊರ್ವರಿಗೆ ಗೊತ್ತಿಲ್ಲದ್ದನ್ನು ನೋಡಿ, ನಿನ್ನ ಪತಿಗಳಾದ ಶಾಂತಿವರ್ಮರು ದಂಡಯಾತ್ರೆಗೆ ಹೊರಡುವದಿಲ್ಲವೆಂದು ನಾನು ಊಹಿಸುತ್ತೇನೆ."

"ವಿಜಯಾದೇವಿಯವರೆ, ವೀರಾಗ್ರಣಿಗಳು ಇಂತಹ ಸುಸಂಧಿಯನ್ನು ವ್ಯರ್ಥವಾಗಗೊಡುವರೇ? ಕ್ಷತ್ರಿಯ ರಮಣಿಯರಾದ ನಮ್ಮಂತಹ ಅಬಲೆಯರಿಗೆ ಸಹ ಈ ಸ್ಫೂರ್ತಿದಾಯಕ ಸಂಗ್ರಾಮದಲ್ಲಿ ಭಾಗ ತೆಗೆದುಕೊಳ್ಳಬೇಕೆಂಬ ಇಚ್ಛೆಯಿರಲು, ನಾಮಾಂಕಿತ ಯೋಧರು ಈ ಅಮೃತಸಂಧಿಯನ್ನು ವ್ಯರ್ಥವಾಗಗೊಡುವರೆ?"

ಈ ಬಗೆಯ ಸಂಭಾಷಣವು ಕರ್ನಾಟಕ ಸಮ್ರಾಜ್ಞಿಯಾದ ವಿಜಯಾಂಬಿಕೆ ಹಾಗು ಅವಳ ಸೊಸೆಯಾದ ವಿಜಯಾದೇವಿ, ಶಾಂತಿವರ್ಮನ ಹೆಂಡತಿಯಾದ ರೇವತಿದೇವಿ ಇವರಲ್ಲಿ ನಡೆದಿತ್ತು.

ಶಾಂತಿವರ್ಮನು ವಾತಾಪಿಪುರದ ಸೇನಾಪತಿಯಾದ ಪ್ರತಾಪವರ್ಮನ ಮಗನು. ಇವನು ಈಗ ಇಪ್ಪತ್ತು ವರ್ಷದವನಿದ್ದನು. ಇವನು ಶೂರನೂ ಸಾಹಸಿಯೂ ಇದ್ದಂತೆ ಅತ್ಯಂತ ವಿಲಾಸಿಯೂ ಆಗಿದ್ದನು. ತಂದೆಯಂತೆ ಇವನು ಕ್ರಮಜೀವಿಯಾಗಿರಲಿಲ್ಲ. ಸುಖೋ

ಪಭೋಗಗಳನ್ನು ಅನುಭವಿಸುತ್ತ ಆನಂದದಿಂದ ಆಯುಷ್ಯವನ್ನು ಕಳೆಯಬೇಕೆಂಬ ತತ್ವದವನು ಆಗಿದ್ದನು. ಇವನು ವೀರಸೇನನ ಪುತ್ರಿಯಾದರೆ ರೇವತಿದೇವಿಯನ್ನು ವರಿಸಿದ್ದನು. ಆ ಕುಮಾರಿಯು ರೇವತಿದ್ವೀಪದಲ್ಲಿ * ಜನಿಸಿದ್ದರಿಂದ ವೀರಸೇನನು ಅವಳಿಗೆ ರೇವತಿದೇವಿಯೆಂಬ ಹೆಸರಿಟ್ಟಿದ್ದನು. ಈಗ ಇವಳ ವಯಸ್ಸು ಹದಿನಾರು ವರ್ಷದ್ದಿರಬಹುದು. ಇವಳು ಅಲೌಕಿಕ ರೂಪವತಿಯೂ, ಸದ್ಗುಣೆಯೂ ಆಗಿದ್ದಳು. ಇವಳು ಅದ್ವಿತೀಯ ದೇಶಾಭಿಮಾನಿಯಿದ್ದು, ಅತ್ಯಂತ ಸಾಹಸಿಯಾಗಿದ್ದಳು. ಈ ವೀರಪುತ್ರಿಯನ್ನು ನೋಡಿ ಮಹಾರಾಜ್ಞಿಯಾದ ವಿಜಯಾಂಬಿಕಾದೇವಿಯು ಹಿರಿಹಿರಿ ಹಿಗ್ಗುತ್ತಿದ್ದಳು.

ಶಾಂತಿವರ್ಮನು ವೀರನೂ ಧೈರ್ಯಶಾಲಿಯೂ ಆಗಿದ್ದನು. ರೇವತಿದೇವಿಯಂತಹ ಅದ್ವಿತೀಯ ಲಾವಣ್ಯವತಿಯು ಪತ್ನಿಯಾದಂದಿನಿಂದ ಅವನು ಕ್ಷಾತ್ರಧರ್ಮೋಚಿತ ಕರ್ತವ್ಯಗಳ ಕಡೆಗೆ ತೀರ ದುರ್ಲಕ್ಷಿಸತೊಡಗಿದ್ದನು. ನೂತನ ಸಂಸಾರಿಯಾಗಿದ್ದ ಅವನು ಕರ್ತವ್ಯಹೀನನಾದದ್ದು ಪ್ರತಾಪವರ್ಮನಿಗೆ ತಿಳಿದಿತ್ತು. ಕೆಲವು ದಿವಸಗಳ ಮೇಲೆ ಹಾದಿಗೆ ಬರಬಹುದೆಂದು ಅವನು ಸಮಾಧಾನಗೊಂಡಿದ್ದನು. ಶಾಂತಿವರ್ಮನು ಕೇವಲ ವಿಷಯಲಾಲಸೆಯಲ್ಲಿ ಮುಳುಗಿ ಯಾವ ವಿಧದ ಸಾಹಸದ ಕಾರ್ಯಗಳನ್ನೂ ಮಾಡಲಾರದವನಾದದ್ದು ವಿಜಯಾಂಬಿಕಾದೇವಿಗೂ ಅವಳ ಸೊಸೆಯಾದ—ಚಂದ್ರಾದಿತ್ಯನ ಪತ್ನಿಯಾದ—ವಿಜಯಾದೇವಿಗೂ † ಗೊತ್ತಾಗಿತ್ತು. ಅಂತೆಯೇ ಶಾಂತಿವರ್ಮನು ಯುದ್ಧಕ್ಕೆ ಹೊರಡುವದಿಲ್ಲೆಂದು ಅವಳು ರೇವತಿದೇವಿಗೆ ತನ್ನ ಊಹೆಯನ್ನು ತಿಳಿಸಿದಳು.

ಉತ್ತರಾಪಥದ ಸಾರ್ವಭೌಮನಾದ ಹರ್ಷವರ್ಧನನೊಡನೆ ಸಮರಕಾರ್ಯಕ್ಕಾಗಿ ಹೊರಡುವದೆಂದರೆ ಸಾಮಾನ್ಯವಾದ ಮಾತಾ

* ಸಾವಂತವಾಡಿ.

† ಇವಳಿಗೆ ವಿಜಯಮಹಾದೇವಿಯೆಂತಲೂ ವಿಜಯಭಟ್ಟಾರಿಕಾದೇವಿಯೆಂತಲೂ ಅನ್ನುತ್ತಿದ್ದರು.

ಗಿದ್ದಿಲ್ಲ. ಈ ಕಾಳಗದ ಸಲುವಾಗಿ ಸತ್ಯಾಶ್ರಯ ಪುಲಿಕೇಶಿಯು ಅಪೂರ್ವವಾದ ಸಿದ್ಧತೆಯನ್ನು ಮಾಡಿಕೊಂಡಿದ್ದನು ದಕ್ಷಿಣದ ಮಂಡಲೇಶ್ವರರೂ, ಸರದಾರ-ಸೇನಾಪತಿಗಳೂ ಶಕ್ತಿಮೀರಿ ಸಹಾಯ ಮಾಡುವೆವೆಂದು ಅವನಿಗೆ ತಿಳಿಸಿದ್ದರು. ಎಲ್ಲ ಕಡೆಯ ಸೈನ್ಯವು ಇಂತಹ ದಿವಸ ನರ್ಮದಾನದಿಯ ದಕ್ಷಿಣತೀರದಲ್ಲಿ ಬರಬೇಕೆಂದು ಪುಲಿಕೇಶಿಯು ತನ್ನ ಮಂಡಲೇಶ್ವರರಿಗೆ ತಿಳಿಸಿದ್ದನು. ತನ್ನ ಸೈನ್ಯದ ಸಿದ್ಧತೆಯನ್ನಾದರೂ ಉತ್ತಮವಾದ ರೀತಿಯಿಂದ ಮಾಡಿಕೊಂಡು, ಅವನು ಒಂದು ಸುಮುಹೂರ್ತದಲ್ಲಿ ವಾತಾಪಿಪುರದಿಂದ ಪ್ರಯಾಣ ಬೆಳೆಯಿಸಬೇಕೆಂದು ನಿರ್ಧರಿಸಿದ್ದನು

ಶಾಂತಿವರ್ಮನು ಒಂದು ಸಣ್ಣ ಪಥಕದ ಸೇನಾನಿಯಾಗಿದ್ದನು. ಅವನು ದಂಡಯಾತ್ರೆಗೆ ಹೊರಡಬಾರದೆಂದು ನಿರ್ಧರಿಸಿಕೊಂಡಿದ್ದನು. ರಾಜಧಾನಿಯ ರಕ್ಷಣೆಯ ಕಾರ್ಯವನ್ನು ಅವನು ವಹಿಸಿಕೊಂಡಿದ್ದನು ಸಮರಕ್ಕೆ ಹೊರಟರೆ ತನ್ನ ನೂತನ ಪರಿಣಿತಳಾದ ರೇವತಿದೇವಿಯ ವಿಯೋಗವಾಗುವದೆಂದೇ ಅವನು ಈ ಕಾರ್ಯವನ್ನು ಬುದ್ಧಿಪೂರ್ವಕವಾಗಿ ಸ್ವೀಕರಿಸಿದ್ದನು. ಪುಲಿಕೇಶಿಯಾದರೂ ಅವನ ಮನೋಗತ ಕಂಡು ಹಿಡಿದದ್ದರಿಂದ, ಸಮರಕ್ಕೆ ಹೊರಡುವ ಬಗ್ಗೆ ಅವನಿಗೆ ಒತ್ತಾಯವನ್ನು ಮಾಡುವ ಸಾಹಸಕ್ಕೆ ಹೋಗಲಿಲ್ಲ.

ಶಾಂತಿವರ್ಮನು ಸಮರಕ್ಕೆ ಹೊರಡುವದಿಲ್ಲವೆಂಬದು ವಿಜಯಾಂಬಿಕೆಗೂ, ವಿಜಯಾದೇವಿಗೂ ಗೊತ್ತಾಗಿತ್ತು. ಅವನು ಯಾವ ಕಾರಣದಿಂದ ರಾಜಧಾನಿಯನ್ನು ಬಿಡುವ ಮನಸ್ಸಿಲ್ಲದವನಾಗಿರುವನೆಂಬದನ್ನಾದರೂ ಅವರು ಅರಿತಿದ್ದರು ಅಂತೆಯೇ ಶಾಂತಿವರ್ಮನು ದಂಡಯಾತ್ರೆಗ ತೆರಳುವದಿಲ್ಲವೆಂದು ರೇವತಿದೇವಿಯ ಸಮ್ಮುಖದಲ್ಲಿ ವಿಜಯಾದೇವಿಯು ಆಡಿ ತೋರಿಸಿದಳು. ನಭೂತಪೂರ್ವವಾದ ಭಾವೀಸಂಗ್ರಾಮದಲ್ಲಿ ಭಾಗ ತೆಗೆದುಕೊಂಡು ಕ್ಷಾತ್ರವೃತ್ತಿಯನ್ನು ದಿಗ್ದರ್ಶನಕ್ಕೆ ತಂದು ಕೊಡುವ ಸಂಧಿಯನ್ನು ವ್ಯರ್ಥವಾಗಗೊಡುವಂತಹ ಅದೂರದರ್ಶಿತನದ ಕಾರ್ಯವನ್ನು ತನ್ನ ಪತಿಯು ಮಾಡ

ಉದ್ಯುಕ್ತನಾಗಿರುವನೆಂಬ ಮಾತು ರೇವತಿದೇವಿಗೆ ಬಹಳೇ ಖೇದ ವನ್ನುಂಟು ಮಾಡಿತು. ತನ್ನ ಪತಿಯು ಈ ಬಗೆಯು ಹೇಡಿಯಲ್ಲ ವೆಂದೂ, ವಿಜಯಾದೇವಿಯು ಮಾತಿನಲ್ಲಿ ತಥ್ಯಾಂಶವೇನೂ ಇರಲಿಕ್ಕಿ ಲ್ಲವೆಂದೂ ಅವಳು ಮನಸ್ಸನ್ನು ಸ್ವಲ್ಪ ಸಮಾಧಾನಪಡಿಸಿಕೊಂಡು:-

"ದೇವಿ, ನೀವು ನನ್ನೊಡನೆ ವಿನೋದ ಮಾಡುತ್ತಿರುವಿರಿ. ಸಮರೋತ್ಸಾಹಿಗಳಾದ ಪತಿಗಳನ್ನು ಕರ್ತವ್ಯಪರಾವೃತ್ತರನ್ನಾಗ ಮಾಡಲಿಕ್ಕೆ ನಿಜವಾದ ವೀರಪುತ್ರಿಯರೂ, ವೀರಪತ್ನಿಯರೂ ಸಾಹಸ ಮಾಡುವರೆ? ನಾನು ಅವರ ಪಯಣಕ್ಕೆ ಅಡ್ಡಾಗಿರುವೆ ನೆಂಬು ನಿಮ್ಮ ಅಭಿಪ್ರಾಯವಿದ್ದಂತೆ ತೋರುವದು. ಬಾಲ್ಯದಿಂದ ನಿಮ್ಮ ಸಹವಾಸವಲ್ಲಿ ಕಾಲಕಳೆದ ನನ್ನ ಹೃದಯ ಪರೀಕ್ಷೆಯು ನಿಮಗಿನ್ನೂ ಆಗಿಲ್ಲೆಂಬದನ್ನು ನೋಡಿ ವಿಸ್ಮಯವಾಗುತ್ತದೆ" ಎಂದು ರೇವತಿದೇವಿಯು ವಿಜಯಾದೇವಿಗೆ ನುಡಿದು, ವಿಜಯಾಂಬಿಕಾದೇವಿ ಯನ್ನು ಕುರಿತು:—"ಮಹಾರಾಣಿಯವರೆ, ನಾನು ಅನುಚಿತವಾದ ಆಚರಣೆಯಿಂದ ನಡೆಯುವವಳೆ? ಪತಿಯು ಯುದ್ಧದಲ್ಲಿ ಪರಾಕ್ರಮ ವನ್ನು ತೋರಿಸಿದ ಕಥೆಯನ್ನು ಕೇಳುವದರಿಂದ ವೀರಪತ್ನಿಗೆ ಸ್ವರ್ಗೀ ಯವಾದ ಆನಂದವಾಗುವದಲ್ಲವೆ?"

"ರೇವತಿ, ನಿನ್ನಲ್ಲಿ ಅಪರಾಧವಿದೆಯೆಂದು ಯಾರು ಹೇಳುವರು? ನೀನು ನಿಜವಾಗಿ ಕ್ಷತ್ರಿಯ ಕುಮಾರಿಯಿರುವೆ; ಆದರ್ಶ ಆರ್ಯ ಲಲನೆಯಿರುವೆ. ನಿನ್ನ ಪತಿಯು ಮಾತ್ರ ಅತ್ಯಂತ ವಿಲಾಸಿಯಾಗಿ ಕರ್ತವ್ಯ ಮೂಢನಾಗಿರುವನು; ಕ್ಷಾತ್ರಧರ್ಮಚ್ಯುತನಾಗಿರುವನು!"

ವಿಜಯಾಂಬಿಕೆಯು ಹೀಗೆ ನುಡಿಯಲು, ರೇವತಿದೇವಿಯು ಮನಸ್ಸು ಹಿಂದು ತರಹವಾಯಿತು. ಪತಿಯಲ್ಲಿ ಅತ್ಯಂತ ಭಕ್ತಿ ಯುಳ್ಳವಳಾದ ಅವಳಿಗೆ ಈ ಆಕ್ಷೇಪಣೆಗಳು ತೀರ ಅಯೋಗ್ಯವಾಗಿ ತೋರತೊಡಗಿದವು. ತನ್ನ ಪತಿಯು ಸದ್ಗುಣ ಸಂಪನ್ನನೆಂದು ಅವಳ ಸರಳಸ್ವಭಾವಕ್ಕೆ ತಿಳಿದಿತು ಅವಳು ತನ್ನ ಮನಸ್ಸಿನ ಯಾವ ವಿಕಾರ ವನ್ನೂ ವ್ಯಕ್ತಪಡಿಸದೆ:—

"ಮಹಾರಾಣಿಯವರೆ, ವಿಜಯಾದೇವಿಯವರೆ, ನಿಮ್ಮ ಕಲ್ಪನೆಯು ತಪ್ಪಾಗಿರುವದು. ನನ್ನ ಪತಿಗಳು ಕರ್ತವ್ಯತತ್ಪರರಿರುವರು. ನನ್ನ ಮಾತಿನ ಸತ್ಯತೆಯು ನಾಳೆಗೆ ತಿಳಿಯುವದು" ಎಂದು ರೇವತಿದೇವಿಯು ಅಭಿಮಾನ ಪುರಸ್ಸರವಾಗಿ ನುಡಿದು, ಅಲ್ಲಿಂದ ಎದ್ದು ತನ್ನ ಮಂದಿರಕ್ಕೆ ತೆರಳಿದಳು.

ಶಾಂತಿವರ್ಮನು ತನ್ನ ಓಲಗದ ಕೋಣೆಯಲ್ಲಿ ಕುಳಿತಿದ್ದನು. ಅರಮನೆಗೆ ಹೋದ ತನ್ನ ಪ್ರಿಯಪತ್ನಿಯು ಇನ್ನೂ ಬಾರದ್ದರಿಂದ ಅವನು ಚಡಪಡಿಸಹತ್ತಿದ್ದನು. ಪ್ರಿಯಾರಾಧನೆಯ ವ್ರತವನ್ನು ಮನಃಪೂರ್ವಕವಾಗಿ ಕೈಕೊಂಡವನಾದ ಆ ಪತ್ನಿವ್ರತಸ್ಥನು ತನ್ನ ಹೃದಯದೇವತೆಯನ್ನು ಒಂದು ಕ್ಷಣವಾದರೂ ಅಗಲಿರಲು ಮನಸ್ಸಿಲ್ಲದವನಾಗಿದ್ದನು. ರೇವತಿಯು ದಿನಕ್ಕೊಮ್ಮೆ ಮಹಾರಾಣಿ ತನ್ನ ಅತ್ತಿಯಾದ ವಿಜಯಾದೇವಿಯ ಭೆಟ್ಟಿಗಾಗಿ ಅರಮನೆಗೆ ಹೋಗುತ್ತಿದ್ದಳು. ಅಷ್ಟು ವೇಳೆಯನ್ನು ಸಹ ಏಕಾಂಗಿಯಾಗಿ ಕಳೆಯುವದು ಶಾಂತಿವರ್ಮನಿಗೆ ದುಸ್ತರವಾಗುತ್ತಿತ್ತು. ಇವನು ಪುಲಿಕೇಶಿಯ ಸೈನ್ಯದೊಳಗಿನ ಹಿಂದಿನ ಪಥಕದ ಸೇನಾನಿಯಾಗಿದ್ದು, ತನ್ನ ಕರ್ತವ್ಯವನ್ನು ಮನಸ್ಸಿಗೊಟ್ಟು ಮಾಡುತ್ತಿರಲಿಲ್ಲ. ಇವನು ತನ್ನ ಹೃದಯದೇವತೆಯ ಏಕನಿಷ್ಠ ಭಕ್ತನಾದುದರಿಂದ, ಪ್ರಿಯಾರಾಧನೆಯ ಹೊರತು ಉಳಿದ ಕರ್ತವ್ಯಗಳ ಇವನಿಗೆ ತಿರಸ್ಕರಣೀಯವಾಗಿದ್ದವು.

ಶಾಂತಿವರ್ಮನು ತನ್ನ ಪತ್ನಿಯ ಮಾರ್ಗಪ್ರತೀಕ್ಷೆ ಮಾಡುತ್ತ ಭಿತ್ತಿವಾತಾಯನದ ಬಳಿಯಲ್ಲಿ ನಿಂತಿದ್ದನು. ಆಗ ದೂರದಲ್ಲಿ ಅವಳ ರಥವು ಬರುತ್ತಿರುವದನ್ನು ನೋಡಿ ಸಂಭ್ರಮಗೊಂಡನು. ಪತಿಯು ತನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರುವನೆಂಬದನ್ನು ಅವಳು ನೋಡಿದ್ದರಿಂದ, ರೇವತಿಯು ರಥದಿಂದಿಳಿದವಳೆ ಓಲಗದ ಕೋಣೆಯಲ್ಲಿ ಬಂದಳು. ಶಾಂತಿವರ್ಮನು ಪತ್ನಿಯನ್ನು ಎದುರ್ಗೊಂಡು ಕೈಹಿಡಿದು ಕರೆತಂದು ಮಂಚಕದ ಮೇಲೆ ಕುಳ್ಳಿರಿಸಿಕೊಂಡನು.

"ಪ್ರಿಯೆ. ಇಂದು ಅರಮನೆಯಿಂದ ಬರಲು ಇಷ್ಟೇಕೆ ತಡ

ವಾಯಿತು?''

"ಮಹಾರಾಣಿ-ವಿಜಯಾದೇವಿಯೊಡನೆ ಮಾತನಾಡುತ್ತ ಕುಳಿತಿದ್ದೆನು. ಮಾತಿನ ಭರದಲ್ಲಿ ವೇಳೆಯು ಪರಿವೆಯುಳಿಯಲಿಲ್ಲ"

"ಅಂತಹ ರಹಸ್ಯಮಯವಾದ ಮಾತಿನ ಪ್ರಸ್ತಾಪವೇನು ನಡೆದಿತ್ತು?"

"ಉತ್ತರದಿಗ್ವಿಜಯಕ್ಕಾಗಿ ನಾಳಿನ ದಿವಸವೇ ಪುಲಿಕೇಶಿ ಮಹಾರಾಜರು ಪಯಣ ಮಾಡುವರಂತೆ ಅದೇ ವಿಷಯವನ್ನು ತೆಗೆದು ಮಾತನಾಡುತ್ತ ಕುಳಿತಿದ್ದೆವು''ಎಂದು ನುಡಿದು, ರೇವತಿಯು ಪತಿಯನ್ನು ಪ್ರೇಮಳದೃಷ್ಟಿಯಿಂದ ನೋಡುತ್ತ:—"ನಾಥ, ರಾಜಧಾನಿಯು ತುಂಬ ತರುಣವರ್ಗವು ದಂಡಯಾತ್ರೆಗಾಗಿ ಹೊರಡಲು ಸಂಭ್ರಮದಿಂದ ಸಿದ್ಧವಾಗತೊಡಗಿರುವದು. ನೀವು ಇದುವರೆಗೂ ಯಾವ ಬಗೆಯ ಸದ್ದಿಲ್ಲದೆ ತಟಸ್ಥವೃತ್ತಿ ತಾಳಿರುವ ಕಾರಣವೇನು?"

"ಪ್ರಿಯೆ, ರಾಜಧಾನಿಯ ರಕ್ಷಣೆಗಾಗಿ ಪುಲಿಕೇಶಿ ಮಹಾರಾಜರು ನನ್ನನ್ನು ನಿಯಮಿಸಿರುವರು. ಎಲ್ಲರೂ ದಂಡಯಾತ್ರೆಗಾಗಿ ತೆರಳಿದರೆ ರಾಜಧಾನಿಯ ಗತಿಯೇನು?"

"ವಿಜಯಾದೇವಿಯವರ ಮಾತು ನಿಜವಾದಂತಾಯಿತು."

"ಅವರು ಏನೆಂದು ಹೇಳಿದರು?

"ನೀವು ದಂಡಯಾತ್ರೆಗಾಗಿ ತೆರಳುವದಿಲ್ಲವೆಂದು ಹೇಳಿದರು."

"ಹೀಗೇನು?" ಎಂದು ನುಡಿದು, ಕಾಂತಿವರ್ಮನು ನಿಶ್ಚಿತವಾದ ವಾಣಿಯಿಂದ:—"ಹೌದು, ನಾನು ಯುದ್ಧಕ್ಕೆ ಹೊರಡುವದಿಲ್ಲ ರಾಜಧಾನಿಯನ್ನು ರಕ್ಷಿಸುವ ಕಾರ್ಯವೇನು ಸಾಮಾನ್ಯವಾದದ್ದೆ?"

"ಉತ್ತರದಿಗ್ವಿಜಯದಂತಹ ಮಹಾಯಾತ್ರೆಯ ಸುವರ್ಣಸಂಧಿಯನ್ನು ನಿಮ್ಮಂತಹ ಲಬ್ಧಪ್ರತಿಷ್ಠಿತರು ವ್ಯರ್ಥವಾಗಗೊಡುವರೆ? ಸಮರ ಸಾಹಸಗಳಿಂದ ವೀರ ಸಿರಿಯನ್ನು ಸೆಳೆದು, ಕೀರ್ತಿಶಾಲಿಗಳಾಗುವದಕ್ಕೆ ನೀವು ಹಿಂಜರಿಯಬಹುದೆ?"

“ಪ್ರಿಯೆ, ಭೀಷಣವೂ, ಪ್ರಾಣಘಾತಕವೂ ಆದ ರಣಕಂದನದಲ್ಲಿ ಸೇರುವದಕ್ಕೆ ನನಗೆ ವಿಧಿಯು ಕಾಡುತ್ತಿರುವದೇನು? ಕುಳಿತು ಸುಖೋಪಭೋಗಗಳನ್ನು ಅನುಭವಿಸುತ್ತ ಕಾಲಹರಣ ಮಾಡಿದರೂ ಎಷ್ಟೊ ತಲೆಗಳವರೆಗೆ ಸಾಲುವಷ್ಟು ಸಂಪತ್ತಿಯಿರುವದು ಹೀಗಿದ್ದು ವ್ಯರ್ಥ ಸಾಯುವದಕ್ಕೆ ರಣರಂಗವನ್ನು ಪ್ರವೇಶಿಸಬೇಕೆನ್ನುವಿಯಾ?”

ಕಾಂತಿವರ್ಮನ ಆ ಮಾತುಗಳನ್ನು ಕೇಳಿ, ರೇವತಿಗೆ ಸಖೇದಾಶ್ಚರ್ಯವಾಯಿತು ತನ್ನ ಪತಿಯು ಆದರ್ಶಕ್ಷಾತ್ರವೀರನೆಂದು ಇದುವರೆಗೆ ಗ್ರಹಿಸಿಕೊಂಡಿದ್ದ ಅವಳ ತಿಳಿವಳಿಕೆಯು ಈ ಮಾತಿನಿಂದ ಪೂರಾ ಸುಳ್ಳಾಯಿತು. ಅವನು ಹೇಡಿಯೂ ಕರ್ತವ್ಯಹೀನನೂ ಇರುವನೆಂದು ರೇವತಿಗೆ ಚನ್ನಾಗಿ ತಿಳಿದದ್ದರಿಂದ, ಅವಳು ಕ್ಲೇಶಗೊಂಡಳು. ಹೇಗಾದರೂ ಮಾಡಿ ಪತಿಯ ಮನಸ್ಸನ್ನು ತಿರುಗಿಸಬೇಕೆಂದು ಅವಳು ನಿಶ್ಚಯಿಸಿಕೊಂಡಳು.

“ಪ್ರಿಯಕರಾ, ಈ ಮಾತುಗಳು ನಿಮ್ಮವೆ? ವೀರಕ್ಷತ್ರಿಯರಾದ ಪ್ರತಾಪವರ್ಮರ ಪುತ್ರರವೆ? ವೀರವನಿತೆಯಾದ ರೇವತಿಯ ಹೃದಯನಾಥರವೆ? ಛೆ! ಅಲ್ಲಲ್ಲ. ಆವರ ಮುಖದಿಂದ ಇಂತಹ ಮಾತುಗಳು ಎಂದೂ ಹೊರಡುತ್ತಿದ್ದಿಲ್ಲ. ಛೆ! ಅಹುದು. ನೀವಾಡಿದ ಮಾತುಗಳೇ ಇವು. ರೇವತೀರಮಣರ ವಾಣಿಯೇ ಇದು. ನೀವು ಹೀಗೆ ವಿನೋದಕ್ಕಾಗಿ ಆಡುತ್ತಿರುವಿರಲ್ಲವೆ? ಈ ನಿಮ್ಮ ಸಾಧು ಭಾವದ ಪತ್ನಿಯನ್ನು ಗೊಂದಲದಲ್ಲಿ ಕೆಡಹುವದಕ್ಕಾಗಿ ಹೀಗೆ ನುಡಿಯಲಾರಂಭಿಸಿರುವಿರಲ್ಲವೆ?”

“ಪ್ರಿಯೆ, ನಿನಗೆ ಮತಿಭ್ರಮೆಯಾಗಿರುವದೇನು? ನನ್ನ ಪ್ರೇಮದ ಪುತ್ಥಳಿಯಾದ ನಿನ್ನನ್ನು ಅರಕ್ಷಣವಾದರೂ ಅಗಲಿರಲಾರದ ನಾನು ಬಹು ದಿವಸಗಳ ವರೆಗೆ ಜರುಗುವ ಯುದ್ಧಕ್ಕೆ ಹೇಗೆ ಹೊರಡಲಿ? ರಣವನ್ನು ಪ್ರವೇಶಿಸಿದ ಮೇಲೆ ಸೋಲು-ಗೆಲವುಗಳು ದೈವಾಧೀನವಾದವುಗಳಲ್ಲವೆ? ಹಿಂದುವೇಳೆ ನಾನು ರಣದಲ್ಲಿ ದೇಹವಿಟ್ಟರೆ ನಿನ್ನ ಮನಸ್ಸಿಗೆ ಸೊಗಸಾ............”

"ಪ್ರಿಯಕರಾ, ಇಂತಹ ಅಭದ್ರ ಮಾತುಗಳನ್ನಾಡಬೇಡಿರಿ. ನಿಮಗೆ ಅಹಿತವಾಗುವಂತಹ ವಿಷಯವನ್ನು ನನ್ನ ಕಿವಿಯಿಂದ ಕೇಳುವದು ಸಹ ಪರಮಾಧಿ ಖೇದವಾಗುತ್ತದೆ. ವೀರಕ್ಷತ್ರಿಯರಾದ ನೀವು ರಣದಲ್ಲಿ ವಿಜಯಶಾಲಿಗಳಾಗಿ ಬರಬೇಕೆಂದೇ ಪರಮಾತ್ಮನನ್ನು ಅನನ್ಯ ಭಾವದಿಂದ ಪ್ರಾರ್ಥಿಸುವೆನು."

"ನಿನ್ನ ಪ್ರಾರ್ಥನೆಯನ್ನು ಪರಮಾತ್ಮನು ಮನ್ನಿಸದಿದ್ದರೆ?"

"ಮನಮೋಹನಾ, ಮನುಷ್ಯನು ಸ್ವದೇಶಕ್ಕಾಗಿ, ಸ್ವಜನರಿಗಾಗಿ, ಸ್ವಾಮಿಗಾಗಿ ಕರ್ತವ್ಯವನ್ನು ಮಾಡಲಿಕ್ಕೇಬೇಕು. ಏಕನಿಷ್ಠೆಯಿಂದ ಕರ್ತವ್ಯಪಾಲನೆ ಮಾಡುತ್ತಿರುವಾಗ ಅಕಸ್ಮಾತ್ ಘಾತವಾದರೆ, ಆ ಸ್ವರಾಜ್ಯನಿಷ್ಠನಿಗೆ ವೀರಸ್ವರ್ಗವೊದಗುವದು. ನೀವು ವೀರಕನ್ನಡಿಗರಿರುವಿರಿ, ವೀರಕ್ಷತ್ರಿಯರಿರುವಿರಿ. ಸಂಗ್ರಾಮದಲ್ಲಿ ಅರಿಗಳೊಡನೆ ಹೋರಾಡುವದಕ್ಕೆ ಅಂಜರಿಯಬೇಕೆ? ನಾಥಾ, ಹೆಚ್ಚಿಗಿನ್ನೇನು ಹೇಳಲಿ? ಪತಿಯು ಸ್ವರಾಜ್ಯದ ಸಲುವಾಗಿ ಧಾರಾತೀರ್ಥದಲ್ಲಿ ಶಯನ ಮಾಡಿದರೆ, ಅವನ ಸಾಧ್ವಿಯಾದ ಸತಿಯು ಅವನ ಪಾದುಕೆಗಳನ್ನು ತೆಗೆದುಕೊಂಡು, ಅಗ್ನಿಕಾಷ್ಠಭಕ್ಷಣೆ ಮಾಡಿ ಸ್ವರ್ಗಧಾಮವನ್ನು ಪ್ರವೇಶಿಸಿದ ಪತಿಯ ಸನ್ನಿಧಿಯನ್ನು ಸೇರುವದಕ್ಕೆ ಹಿಂದು ಮುಂದೆ ನೋಡುವಳೇ?"

"ಅಂತೂ ನನ್ನನ್ನು ಕೊಲ್ಲಬೇಕೆನ್ನುವೆಯಲ್ಲವೆ?"

"ರಣಕ್ಕೆ ಅಂಜುವವರೂ ಸಾವಿಗೆ ಅಂಜುವವರೂ ಆದ ನೀವು ವೀರಕ್ಷತ್ರಿಯರೂ ಅಲ್ಲ; ಶೂರ ಕನ್ನಡಿಗರೂ ಅಲ್ಲ!"

ಎಂದು ರೇವತಿಯು ತಿರಸ್ಕಾರದಿಂದ ನುಡಿದು, ಮುಖವನ್ನು ತಿರುಗಿಸಿ ಕುಳಿತಳು.

---

## ರೈವತಸೇನ!

ಸತ್ಯಾಶ್ರಯ ಪುಲಿಕೇಶಿಯು ತನ್ನ ವಿಜಯಸೈನ್ಯದೊಡನೆ ರೇವಾನದಿಯ ದಕ್ಷಿಣತಟಾಕದಲ್ಲಿ ಬೀಡುಬಿಟ್ಟದ್ದನು. ಹರ್ಷವರ್ಧನನಂತಹ ಬಲಾಢ್ಯ ಶತ್ರುವಿನೊಡನೆ ಕೈಗೂಡಬೇಕಾದ್ದರಿಂದ ಅವನು

ಸೇನಾಸಿದ್ಧತೆಯನ್ನು ಚನ್ನಾಗಿ ಮಾಡಿದ್ದನು. ಗಂಗರಾಜನಾದ ಶ್ರೀವಲ್ಲಭನೂ, ಅಳೂಪ ರಾಜನಾದ ಗುಣಸಾಗರನೂ, ಸೇಂದ್ರಕ ರಾಜನಾದ ದುರ್ಗಶಕ್ತಿಯೂ, ಚೋಳ-ಚೇರ-ಪಾಂಡ್ಯ-ಕಲಿಂಗ ಮೊದಲಾದ ಮಂಡಲೇಶ್ವರರೂ ತಮ್ಮ ತಮ್ಮ ಸೈನ್ಯದೊಡನೆ ಕರ್ನಾಟಕ ಸಾರ್ವಭೌಮನನ್ನು ಕೂಡಿದ್ದರು. ಪಲ್ಲವರಾಜನಾದ ಮಹೇಂದ್ರವರ್ಮನೂ ಸಾಧ್ಯವಾದಷ್ಟು ಸೇನಾಸಹಾಯವನ್ನು ಒದಗಿಸಿಕೊಟ್ಟಿದ್ದನು. ಪುಲಿಕೇಶಿಯ ಅಮೋಘವಾದ ಸೈನ್ಯವು ಶತ್ರುಗಳ ಎದೆಯೊಡೆಸುವಂತಹದಾಗಿತ್ತು. ಸ್ವರ್ಗದ ಮೇಲೆ ದಾಳಿ ಮಾಡಿ, ಇಂದ್ರಪದವನ್ನು ಸಾಧಿಸುವಂತಹ ಯೋಗ್ಯತೆಯು ಆ ಸೈನ್ಯದಲ್ಲಿರಬಹುದೆಂದು ಜನರು ಅನ್ನತೊಡಗಿದ್ದರು. ತ್ರೈಲೋಕ್ಯಸತ್ವವನ್ನು ಹರಣ ಮಾಡುವ ಪುಲಿಕೇಶಿಸಮ್ರಾಟನ ವಿಕ್ರಮಶಾಲಿಗಳಾದ ದಂಡಾಳುಗಳ ತುಳಿತದಿಂದ ಭೂಮಿಯು ನಡುಗತೊಡಗಿತ್ತು; ಪದಕ್ಷೇಪದಿಂದೆದ್ದ ಧೂಳಿಯು ನಭಪ್ರಾಂತವನ್ನೆಲ್ಲ ವ್ಯಾಪಿಸಿ, ಸೂರ್ಯಪ್ರಕಾಶಕ್ಕೆ ಅಡ್ಡಿ ಮಾಡಿತ್ತು!

ಹರ್ಷವರ್ಧನನ ಸೈನ್ಯವು ನರ್ಮದೆಯ ಉತ್ತರತೀರದಲ್ಲಿ ತಳವೂರಿತು. ಸಿಂಹನಾದ ಸೇನಾಪತಿಯ ಅಶ್ವದಳವೂ, ಸ್ಕಂದಗುಪ್ತನ ಗಜಸೈನ್ಯವೂ ಭಂಡಿಯ ಪದಾತಿಯೂ ಮಹೋತ್ಸಾಹದಿಂದ ದಕ್ಷಿಣಾಪಥದ ಮೇಲೆ ಸಾಗಿ ಹೋಗಬೇಕೆನ್ನುವ ಹವಣಿಕೆಯಲ್ಲಿತ್ತು. ನಾಲ್ಕಾರು ದಿನಗಳ ವರೆಗೆ ಕನ್ನಡಿಗರೂ, ಕನೋಜಿಯರೂ ಸ್ತಬ್ಧರಾಗಿಯೇ ಇದ್ದರು. ಅವರು ಪರಸ್ಪರರ ಮಟ್ಟವನ್ನು ತಿಳಿದುಕೊಳ್ಳಲಿಕ್ಕೆ ಹಲವು ಬಗೆಯ ಹಂಚಿಕೆಗಳನ್ನು ಮಾಡಿದರು. ರಾಯಭಾರಿಗಳೂ, ಗುಪ್ತಚಾರರೂ ಆ ದಂಡೆಯಿಂದ ಈ ದಂಡೆಯ ವರೆಗೂ, ಈ ದಂಡೆಯಿಂದ ಆ ದಂಡೆಯ ವರೆಗೂ ಎಷ್ಟೋ ಸಾರೆ ಎಡತಾಕಿದರು. ಕನ್ನಡಿಗರ ಕಲಿತನವೂ, ಎದೆಗಾರಿಕೆಯೂ ಹರ್ಷವರ್ಧನನಿಗೆ ಕಾಣದಂತಾದವು. ತನಗೆ ಶರಣು ಬಂದು ರಾಜಮುಕುಟವನ್ನರ್ಪಿಸಿ, ಮಾಂಡಲಿಕನೆಂದು ಒಪ್ಪಿಕೊಳ್ಳಬೇಕೆಂದು ಅವನು ಪುಲಿಕೇಶಿಗೆ ಹೇಳಿ

ಕಳುಹಿಸಿದನು. ಈ ಬಗೆಯ ನಿರ್ಲಜ್ಜೆಯ ನಿರೋಪವನ್ನು ಕೇಳಿ, ಕರ್ನಾಟಕಸಿಂಹನು ಕ್ರೋಧಸಂತಪ್ತನಾದನು! ಸಾಧ್ಯವಿದ್ದಮಟ್ಟಿಗೆ ಯುದ್ಧಪ್ರಸಂಗವನ್ನು ತಪ್ಪಿಸಿ ಅನರ್ಥಕಾರಕವಾದ ರಕ್ತಪಾತವನ್ನು ನಿಲ್ಲಿಸಬೇಕೆಂದು ಅವನು ಉಕ್ಕಿ ಹೊರಸೂಸುವ ಸಂತಾಪವನ್ನು ಶಮನ ಮಾಡಿಕೊಂಡನು. ಒಳ್ಳೆಯ ಮಾತಿನಿಂದ ಸಂಧಾನವನ್ನು ಮಾಡಿಕೊಳ್ಳಬೇಕೆಂದು ಅವನು ಇನ್ನೂ ಯತ್ನಿಸತೊಡಗಿದ್ದನು. ನರ್ಮದೆಯ ತೆಂಕಲಿಗಿದ್ದ ಪ್ರದೇಶವೆಲ್ಲ ತನ್ನದೇ ಎಂದು ಒಪ್ಪಿದರೆ ಯುದ್ಧಪ್ರಸಂಗವು ತಪ್ಪುವದೆಂದೂ, ಹಾಗೆ ಒಪ್ಪದಿದ್ದರೆ ಉನ್ಮತ್ತತನದ ಫಲವನ್ನು ಭೋಗಿಸಬೇಕಾಗುವದೆಂದೂ ಅವನು ಹರ್ಷವರ್ಧನನಿಗೆ ಖಂಡಿತವಾಗಿ ಹೇಳಿ ಕಳಿಸಿದನು. ವಾತಾಪಿಪುರದಿಂದ ಅಪಾರ ಸೈನ್ಯದೊಡನೆ ಕರ್ನಾಟಕದ ರಾಜಮುಕುಟವನ್ನು—ದಕ್ಷಿಣಾತ್ಯರ ಗೌರವವನ್ನು—ಕನ್ನಡಿಗರ ಅಭಿಮಾನವನ್ನು ಗುಪ್ತಸಾರ್ವಭೌಮರ ಕಾಲಬುಡದಲ್ಲಿ ಹಾಕುವದಕ್ಕೆ ಬಂದಿರದೆ, ಪ್ರಸಂಗವೊದಗಿದರೆ ಉತ್ತರಾಪಥದ ರಾಜಮುಕುಟವನ್ನು ಛಿನ್ನ-ವಿಚ್ಛಿನ್ನ ಮಾಡಲಿಕ್ಕೆ ಸಾಗಿ ಬಂದಿರುವೆನೆಂಬದನ್ನು ನೆನಪಿನಲ್ಲಿಟ್ಟುಕೊಂಡು ವರ್ತಿಸುವ ಬಗ್ಗೆ ಪುಲಿಕೇಶಿಯು ಅವನಿಗೆ ತಿಳಿಸಿದ್ದನು. ಹರ್ಷವರ್ಧನನಿಗೆ ಅವನು ಕ್ಷುಪದಾರ್ಥವಾಗಿ ಕಾಣತೊಡಗಿದ್ದನು. ಕನ್ನಡಿಗರ ಕೈಯ ಸವಿಯು ಅವನಿಗೆ ಮುತ್ಕಿಂಚಿತ್ತಾದರೂ ಗೊತ್ತಿರಲಿಲ್ಲ. ಹೀಗಿದ್ದ ಮೇಲೆ ಅವನು ಒಳ್ಳೆಯ ಮಾತಿನಿಂದ ಬುದ್ಧಿಗಲಿಯುವನೆ? ಬಿಸಿಯಾಗದೆ ಬೆಣ್ಣೆಯು ಹೇಗೆ ಕರಗೀತು?

ಪುಲಿಕೇಶಿಯು ತನ್ನ ಶಿಬಿರದಲ್ಲಿ ಕುಳಿತಿದ್ದನು. ಹರ್ಷವರ್ಧನನು ನರ್ಮದೆಯನ್ನು ದಾಟುವದಕ್ಕಾಗಿ ಸೈನಿಕರಿಗೆ ಆಜ್ಞೆಯಿತ್ತಿರುವನೆಂದು ಅವನ ಗುಪ್ತಚರನು ಸುದ್ದಿ ತಂದನು. ಕೂಡಲೆ ಪುಲಿಕೇಶಿಯು ಹರ್ಷವರ್ಧನನ ಸೈನ್ಯವು ದಾಟಿ ಬರುವ ಸ್ಥಳದಲ್ಲೆಲ್ಲ ತನ್ನ ನುರಿತ ದಂಡಾಳುಗಳನ್ನೂ ನಂಬಿಗಸ್ತರಾದ ದಳವಾಯಿಗಳನ್ನೂ ನಿಲ್ಲಿಸಿದನು. ಅನಂತರದಲ್ಲಿ ಅವನು ಅಶ್ವಾರೋಹಿಯಾಗಿ ಕೆಲವು

ಕೂರ ದಂಡಾಳುಗಳೊಂದಿಗೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಸಂಚರಿಸತೊಡಗಿದನು. ಕನ್ಯಕುಬ್ಜದ ದಂಡು ಎಂಟು-ಹತ್ತು ಬೇರೆ-ಬೇರೆಯಾದ ಸ್ಥಳದಲ್ಲಿ ಹೊಳೆಯನ್ನು ದಾಟಲಿಕ್ಕೆ ಹೆಣಗಿತು; ಆಗ ಕನ್ನಡಿಗರ ಕಸುವು ಹೆಚ್ಚಾದ್ದರಿಂದ ಅದು ಹಿಂಜರಿಯಿತು. ಹರ್ಷವರ್ಧನನು ತನ್ನ ಸೈನಿಕರನ್ನು ಪ್ರೋತ್ಸಾಹಿಸುತ್ತ, ಹೊಸ ಸೈನ್ಯವನ್ನು ಬೆಂಬಲವಾಗಿ ಕಳುಹಿಸಿದನು. ಆಗ ಮಾತ್ರ ಉತ್ತರಾಪಥದವರ ಕಸುವು ಹೆಚ್ಚಾದ್ದರಿಂದ, ಕನ್ನಡಿಗರು ಹಿಂಜರಿದರು. ಕೂಡಲೆ ಪುಲಿಕೇಶಿಯೂ ಪ್ರತಾಪವರ್ಮನೂ ಹೊಸ ಸೈನ್ಯವನ್ನೊಯ್ದು ಅವರನ್ನು ಹಿಂದಕ್ಕಟ್ಟಿದರು. ಕನ್ನಡ ಕಲಿಗಳು ಬಾಣಗಳ ಸುರಿಮಳೆಯಿಂದಲೂ, ತುಬಾಕಿಗಳ ಗುರಿ ಹೊಡತದಿಂದಲೂ, ಕತ್ತಿ-ಬರ್ಚಿಗಳ ಕಡುಕಡತದಿಂದಲೂ ಹಬ್ಬ ಹಗೆಯನ್ನಾದರೂ ಈಚೆಯ ದಂಡೆಯ ಮೇಲೆ ಇರಗೊಡಲಿಲ್ಲ. ಹರ್ಷವರ್ಧನನೂ ಅವನ ದಳವಾಯಿಗಳೂ ಹುರಿದುಂಬಿಸಿ ಕಳುಹಿಸಿದ ಕನೋಜಿಯರು ಕನ್ನಡಿಗರ ಕತ್ತಿಗೆ ತುತ್ತಾದರು. ನದಿಯ ನೀರೆಲ್ಲ ರಕ್ತಮಯವಾಯಿತು. ಹೆಣಗಳ ರಾಶಿಗಳು ಪರ್ವತಪ್ರಾಯವಾಗಿ ಅಲ್ಲಲ್ಲಿ ಬಿದ್ದವು! ಕನ್ನಡಿಗರ ಗುರಿಹೊಡತದ ಕಲೆಯನ್ನೂ, ಅವರ ಸೋಜಿಗವಾದ ಪೌರುಷನ್ನೂ, ಅವರ ಅಚ್ಚರಿಗೊಳಿಸುವಂತಹ ವೀರಾವೇಶವನ್ನೂ ಕಂಡು ಕಂಗೆಟ್ಟು ಕನೋಜರು ಎದೆಯೊಡೆಕೊಂಡರು. ಅಂದಿನ ಯುದ್ಧದಲ್ಲಿ ವಿಜಯಶ್ರೀಯು ಕನ್ನಡ ಸಾರ್ವಭೌಮನಿಗೆ ಮಾಲೆ ಹಾಕಿದಳು! ದಕ್ಷಿಣಾತ್ಯ ದಂಡಾಳುಗಳೂ ದಳವಾಯಿಗಳೂ ಸಸಂಭ್ರಮದಿಂದ ಶಿಬಿರವನ್ನು ಸೇರಿದರು.

ಪುಲಿಕೇಶಿಯು ವಿಜಯಾನಂದದಿಂದ ತನ್ನ ಸೇನಾಪತಿಗಳ ಹಾಗು ಮಾಂಡಲಿಕ ರಾಜರ ಸಂಗಡ ಅಂದಿನ ಯುದ್ಧದ ಸಂತೋಷಪ್ರದವಾದ ವಿಷಯವನ್ನು ಕುರಿತು ಮಾತನಾಡುತ್ತ ಕುಳಿತಿದ್ದನು. ಅಂದು ಕನ್ನಡ ಸೈನಿಕರು ತೋರಿಸಿದ ಅವರ್ಣನೀಯ ಸಾಹಸವನ್ನೂ ಸೇನಾಪತಿ-ಸರದಾರರ ಹಾಗು ಮಂಡಲೇಶ್ವರರ ಸಮರೋತ್ಸಾಹವನ್ನೂ ಯಥೇಷ್ಟವಾಗಿ ಅವನು ವರ್ಣಿಸತೊಡಗಿದ್ದನು. ಅಂದು

ಹರ್ಷವರ್ಧನನ ಸೈನಿಕರು ಪೂರ್ಣವಾಗಿ ಪರಾಭೂತರಾಗಿದ್ದರೂ ಮತ್ತೆ ದಂಡೆತ್ತಿ ಬರುವರೆಂದು ಎಲ್ಲ ಜನರಿಗೂ ಮನವರಿಕೆಯಾಗಿತ್ತು. ಹರ್ಷವರ್ಧನನ ಸೈನ್ಯವು ಬಂದರೆ ಅದನ್ನು ಪರಾಭವಗೊಳಿಸಲಿಕ್ಕೆ ಹೇಗೆ ಹೇಗೆ ತಂತ್ರಗಳನ್ನು ಮಾಡಬೇಕೆಂದು ಅವರು ವಿಚಾರಮಾಡ ತೊಡಗಿದ್ದರು. ಆಗ ಪ್ರತಾಪವರ್ಮನು ಪುಲಕೇಶಿಯನ್ನು ಕುರಿತು:

"ಮಹಾರಾಜರೆ. ನಮ್ಮ ಸೈನ್ಯವು ಹರ್ಷವರ್ಧನನ ಸೈನ್ಯವನ್ನು ನಾಶ್ಯ ಮಾಡುವದ[illegible] ಸಂದೇಹವಿಲ್ಲ. ಆದರೆ ಯಾವದೊಂದು ಕಾರಸ್ಥಾನದಿಂದ [illegible] ಹೆಚ್ಚಾಗಿ ನಾಶವಾಗುವಂತೆ ಪ್ರಯತ್ನಿಸಬೇಕು. ಹರ್ಷವರ್ಧನನು ನೌಕೆಗಳ ಹಾಗು ಡೋಣಿಗಳ ಮೇಲೆ ತನ್ನ ಸೈನ್ಯವನ್ನು [illegible]ಹಿಸುವನು. ನೌಕೆಗಳೂ, ಡೋಣಿಗಳೂ ಬರುವ ಮಾರ್ಗಕ್ಕೆ ಎದುರಾಗಿ [illegible] ನಾಮಾಂಕಿತ ಯೋಧರನ್ನು ನಿಲ್ಲಿಸತಕ್ಕದ್ದು. ಎಲ್ಲ ತುಬಾಕಿಯವರೂ ಬಿಲ್ಲುಗಾರರೂ ಹೆಚ್ಚು ಜನರಿರತಕ್ಕದ್ದು. ನೌಕಗಳು ಪ್ರವಾಹಮಧ್ಯದಲ್ಲಿ ಬಂದ ಕೂಡಲೆ ಗುಂಡಿನ ಮಳೆಯನ್ನೂ ಬಾಣವೃಷ್ಟಿಯನ್ನೂ ಸುರಿಸತಕ್ಕದ್ದು. ಈ ಕಂಟಕದಿಂದ ಪಾರಾಗಿ ಬಂದ ಸೇನೋಜೀಯರ ಸಮಾಚಾರವನ್ನು ನಾನು ತೆಗೆದುಕೊಳ್ಳುವೆನು. ನನ್ನ ಈ ಹಂಚಿಕೆಯು ಮಹಾರಾಜರವರ ಮನಸ್ಸಿಗೆ ಬರುತ್ತಿದ್ದರೆ ಅದರಂತೆ ಕಾರ್ಯಾರಂಭ ಮಾಡುವೆವು"

ಪ್ರತಾಪವರ್ಮನ ಈ ಹಂಚಿಕೆಯು ಎಲ್ಲ ಜನರಿಗೂ ಯೋಗ್ಯವೆಂದು ಕಂಡಿತು. ಸೈನ್ಯದೊಳಗಿನ ಬಿಲ್ಲುಗಾರರನ್ನೂ, ಹೆಸರಾದ ತುಬಾಕಿಗಾರರನ್ನೂ ಆರಿಸುವ ಕಾರ್ಯವನ್ನು ವೀರಸೇನನು ತನ್ನ ಮೇಲೆ ವಹಿಸಿಕೊಂಡನು. ಪ್ರತಾಪವರ್ಮನು ಎಲ್ಲ ಪಥಕದೊಳಗಿನ ನಾಮಾಂಕಿತರಾದ ಖಡ್ಗಧುರೀಣರನ್ನು ಆರಿಸುವದಕ್ಕಾಗಿ ಅಲ್ಲಿಂದ ತೆರಳಿದನು. ಎಲ್ಲ ಪ್ರಮುಖಜನರು ತಮ್ಮ ತಮ್ಮ ಉದ್ಯೋಗದಲ್ಲಿ ತೊಡಗಿದರು. ಪುಲಿಕೇಶಿಯಾದರೂ ಎಲ್ಲ ಪಥಕಗಳಲ್ಲಿ ತಿರುಗಿ ಸೈನಿಕರ ಹಾಗು ಸೇನಾನಾಯಕರ ಸಮಾಚಾರವನ್ನು ತೆಗೆದುಕೊಳ್ಳಬೇಕೆಂದು

ವಿಚಾರಿಸಿ ಅಲ್ಲಿಂದ ಹೊರಡಲನುವಾಗಿದ್ದನು. ಅಷ್ಟರಲ್ಲಿ ಹದಿನಾರು ವರ್ಷದ ವಯಸ್ಸಿನ ಒಬ್ಬ ತರುಣ ಸೈನಿಕನು ಅಲ್ಲಿಗೆ ಬಂದು ಸಾರ್ವ ಭೌಮನಿಗೆ ವಂದಿಸಿ:—

"ಮಹಾರಾಜರೆ, ನನ್ನನ್ನು ತಮ್ಮ ಸೇವೆಯಲ್ಲಿರಿಸಿಕೊಳ್ಳಬೇಕು, ಎಂದು ಪ್ರಾರ್ಥಿಸುವೆನು."

"ನೀನು ಎಲ್ಲಿಯವನು?"

"ನಾನು ಕರ್ನಾಟಕದವನು. ಶ್ರೀಕ್ಷೇತ್ರವು ನನ್ನ ಜನ್ಮಗ್ರಾ-ಮವು; ನನ್ನ ಗ್ರಾಮವು ವಾತಾಪಿಪುರದ ಸಮೀಪದಲ್ಲೇ ಇರುವದು. ತಮ್ಮ ಪಡೆಯು ಉತ್ತರದಿಗ್ವಿಜಯಕ್ಕಾಗಿ ಹೊರಟ ಸಂಗತಿಯು ನನಗೆ ಗೊತ್ತಾದ್ದರಿಂದ ಯುದ್ಧದಲ್ಲಿ ಸಾಹಸವಿದ್ದವುಟ್ಟಿಗೆ ಕರ್ತವ್ಯ ಪ್ರಭಾವವನ್ನು ತೋರಿಸಿ, ರಾಷ್ಟ್ರಕಾರ್ಯಕ್ಕೆ ಅಳಿಲೀಭಕ್ತಿಯಿಂ ತಾದರೂ ನೆರವಾಗಬೇಕೆಂದು ಧಾವಿಸಿ ಬಂದಿರುವೆನು."

"ನೀನಿನ್ನೂ ಬಾಲಕನಿರುವೆ. ಸಂಗ್ರಾಮವುಪಟ್ಟಿಯ ಆತ್ಮಘಾತಕಕೃತ್ಯಕ್ಕೆ ಮುಂದುವರಿಯುವದು ಯೋಗ್ಯವಲ್ಲ. ರಾಷ್ಟ್ರಾಭಿಮಾನದಿಂದ ನೀನು ಇಲ್ಲಿಯ ವರೆಗೆ ಬಂದದ್ದಕ್ಕೆ ನನಗೆ ಆನಂದವಾಗಿದೆ. ಸ್ವದೇಶನಿಷ್ಠನಾದ ನಿನ್ನನ್ನು ನನ್ನ ಬಳಿಯಲ್ಲಿಟ್ಟುಕೊಳ್ಳುವೆನು; ಆದರೆ ಯುದ್ಧಕಾರ್ಯದಲ್ಲಿ ಮಾತ್ರ ನೀನು ತೊಡಗಕೂಡದು."

"ಮಹಾರಾಜರೆ, ನಾನು ನಿಮ್ಮ ಬಳಿಯಲ್ಲಿ ರಾಜವಿಲಾಸ ವನ್ನು ಭೋಗಿಸುವದಕ್ಕಾಗಿ ಇಲ್ಲಿಯ ವರೆಗೆ ಬಂದಿಲ್ಲ ನನ್ನಿಂದ ಏನ್ನಾದರೂ ತಮ್ಮ ದಿಗ್ವಿಜಯಕಾರ್ಯದಲ್ಲಿ ಉಪಯೋಗಬೀಳಬಹುದಾಗಿದೆ. ಸಮರಭೂಮಿಯಲ್ಲಿ ಹೆಜ್ಜೆಯನ್ನಿಡಬಾರದೆಂದು ತಮ್ಮ ಆಜ್ಞೆಯಾದರೆ ನಾನು ಇಲ್ಲಿಯ ವರೆಗೆ ಬಂದದ್ದರ ಸಾರ್ಥಕನೇನು?"

"ಬಾಲಕಾ, ನನ್ನ ಸೈನ್ಯದಲ್ಲಿ ನಿನಗಿಂತಲೂ ಹೆಚ್ಚಿನ ಶೂರ ಸೈನಿಕರು ಅನೇಕ ಜನರಿರುವರು. ನಿನ್ನಿಂದಲೇ ಹೆಚ್ಚಿನ ಕಾರ್ಯ ವಾಗುವದೆಂಬಂತೆ ಏನೂ ಇರುವದಿಲ್ಲ ನೀನು ಶಿಬಿರದಲ್ಲಿದ್ದು ಇತರ ವ್ಯವಸ್ಥೆಯನ್ನು ನೋಡುತ್ತಿರು"

"ನನ್ನಂತಹ ಶೂರರೂ, ಹೆಚ್ಚಿನ ಸಾಹಸಿಗಳೂ ನಿಮ್ಮ ದಂಡಿನಲ್ಲಿಲ್ಲವೆಂದು ನಾನು ಹೇಳುವದಿಲ್ಲ. ನನ್ನಿಂದಲೇ ನಿಮಗೆ ವಿಜಯವಾಗುವದೆಂದು ನನ್ನ ಅಭಿಪ್ರಾಯವಲ್ಲ. ಸಮರದಲ್ಲಿ ನಿಮ್ಮ ಎಲ್ಲ ಸೈನಿಕರಿಗಿಂತಲೂ, ಸರದಾರ-ಸೇನಾಪತಿಗಳಿಗಿಂತಲೂ ಹೆಚ್ಚಿನ ಕರ್ತವ್ಯಚಮತ್ಕಾರವು ನನ್ನಿಂದ ಪ್ರಕಟವಾಗದಿರಲಾರದೆಂದು ನನ್ನ ಆತ್ಮವಿಶ್ವಾಸವಿರುವದು."

ಪುಲಿಕೇಶಿಗೆ ಆ ನವತರುಣನ ಮಾತುಗಳು ಪರಮಾಶ್ಚರ್ಯವನ್ನುಂಟು ಮಾಡಿದವು. ಆ ಸೈನಿಕನು ಅವನಿಗೆ ಚಕ್ರವ್ಯೂಹವನ್ನು ಭೇದಿಸಲು ಹೊರಟ ಅಭಿಮನ್ಯುವಿನಂತೆ ಕಂಡನು. ಅವನಲ್ಲಿ ಅನುಪಮ ಸಮರೋತ್ಸಾಹವೂ ಅದ್ವಿತೀಯ ಸಾಹಸವೂ ಇರುವದೆಂದು ಪುಲಿಕೇಶಿಗೆ ಮನವರಿಕೆಯಾಯಿತು. ಆಗ ಅವನು ಆ ಸೈನಿಕನನ್ನು ಕುರಿತು:—

"ನಿನ್ನ ಹೆಸರೇನು?"

"ನನಗೆ ದೈವತಸೇನನೆನ್ನುವರು."

"ದೈವತಸೇನಾ, ನೀನು ನನ್ನ ಬಳಿಯಲ್ಲಿದ್ದು ಸಂಗ್ರಾಮದಲ್ಲಿ ನನಗೆ ನೆರವಾಗು."

"ಮಹಾರಾಜರೆ, ನನಗೆ ನಿಮ್ಮ ಬಳಿಯಲ್ಲಿರುವದಕ್ಕೆ ಅನುವೆಲ್ಲಿರುವದು!"

'ಹಾಗಾದರೆ ನೀನು ಯಾವ ಕೆಲಸವನ್ನು ಮಾಡಬೇಕೆನ್ನುವೆ?'

"ನಾನು ಒಂದು ದೊಡ್ಡ ಕಾರ್ಯವನ್ನು ಮಾಡಬೇಕೆಂಬ ಸಾಹಸದಲ್ಲಿರುವೆನು."

"ಅದೇನು?" ಎಂದು ಪುಲಿಕೇಶಿಯು ಉತ್ಕಂಠಿತನಾಗಿ ಕೇಳಿದ ಕೂಡಲೆ, ದೈವತಸೇನನು:— "ಹರ್ಷವರ್ಧನನು ರಾಜಮುಕುಟವನ್ನೊಪ್ಪಿಸಿ ಶರಣು ಬರಬೇಕೆಂದು ನಿಮಗೆ ಸಂದೇಶ ಕಳಿಸಿರುವನಲ್ಲವೆ? ಅವನ ಈ ಉನ್ಮತ್ತನಡತೆಗಾಗಿ ಅವನಿಗೆ ತಕ್ಕ ಶಾಸನೆವನ್ನು ವಿಧಿಸಬೇಕೆಂದು ಮಾಡಿರುವೆನು."

'ರೈವತಸೇನಾ, ಹರ್ಷವರ್ಧನನನ್ನು ನೀನು ದಂಡಿಸತಕ್ಕವನೆ?'

"ಅವನ ಶಿರವನ್ನಾಗಲಿ, ರಾಜಮುಕುಟವನ್ನಾಗಲಿ ತಂದು ನಿಮ್ಮ ಸನ್ನಿಧಾನದಲ್ಲಿರಿಸಬೇಕೆಂದು ನನ್ನ ಮಹತ್ವಾಕಾಂಕ್ಷೆಯಿರುವದು. ಕರ್ನಾಟಕ ಸಾರ್ವಭೌಮರ ಯೋಗ್ಯತೆಯು ಎಷ್ಟಿರುವದೆಂಬದನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಡಬೇಕಾಗಿದೆ."

ರೈವತಸೇನನ ಮಾತುಗಳನ್ನು ಕೇಳಿ ಪುಲಿಕೇಶಿಯು ದಂಗುಬಡೆದು ಕುಳಿತನು! ಮೂರ್ತಿಯು ಸಣ್ಣದಾದರೂ ಕೀರ್ತಿಯು ದೊಡ್ಡದಿರುವದೆಂದು ಅವನು ಭಾವಿಸಿದನು. ಅವನು ರೈವತಸೇನನನ್ನು ಕುರಿತು ವಿಸ್ಮಯದಿಂದ:—

"ಈ ಮಹತ್ಕಾರ್ಯವು ನಿನ್ನಿಂದ ಹೇಗೆ ಕೈಗೂಡೀತು? ಹರ್ಷವರ್ಧನನೆಂದರೆ ಸಾಮಾನ್ಯನಿರುವದಿಲ್ಲ. ಅವನ ಸೇನೆಯು ದುರ್ಭೇದ್ಯವಿರುವದು. ಹರ್ಷವರ್ಧನನ ಮುಕುಟವನ್ನಾಗಲಿ ಅವನ ಶಿರವನ್ನಾಗಲಿ ತರುವ ಕಾರ್ಯವು ಸಣ್ಣದೆಂದು ಭಾವಿಸಬೇಡ."

"ಮಹಾರಾಜರೆ, ನಾನು ಎಲ್ಲವನ್ನೂ ಅರಿತಿರುವೆನು. ನನ್ನ ಮಾತುಗಳು ಕೇವಲ ಆಡಂಬರದವಲ್ಲವೆಂಬದನ್ನು ನಾಳೆಗೇ ತಮ್ಮ ನಿದರ್ಶನಕ್ಕೆ ತಂದು ಕೊಡುವೆನು!"

"ನೀನು ಭಯಂಕರವಾದ ಕೃತ್ಯವನ್ನು ಮಾಡಲಿಕ್ಕೆ ಹೋಗಿ ಪ್ರಾಣಕ್ಕೆ ಎರವಾಗಬಹುದೆಂದು ನನ್ನ ಭಾವನೆಯಾಗಿರುವದು."

"ವೀರಕನ್ನಡಿಗರು ಮರಣಕ್ಕೆ ಹಿಂಜರಿಯುವರೆ? ನಾನು ನನ್ನ ಕರ್ತವ್ಯವನ್ನು ನೆರವೇರಿಸದೆ ರಣದಲ್ಲಿ ಮೈಗೊಡಲಾರೆನೆಂದು ಖಂಡಿತವಾಗಿ ಹೇಳುವೆನು."

"ನೀನು ಮೋಸದಿಂದ ಹರ್ಷವರ್ಧನನನ್ನು ಘಾತಿಸಬೇಕೆಂದು ಯತ್ನಿಸಿರುವೆಯಲ್ಲವೆ? ಈ ಕೃತಿಯು ಕನ್ನಡಿಗರ ಶೀಲಕ್ಕೆ ಕುಂದು ತರುವಂತಹದಿರುವದು. ಅವನ ಮುಕುಟವನ್ನು ತಂದು ಒಬ್ಬ ಘನವಂತನಾದ ಸಾರ್ವಭೌಮನ ಮಾನಖಂಡನೆ ಮಾಡಬೇಕೆಂದು ನನ್ನ ಇಚ್ಛೆಯಿರುವದಿಲ್ಲ. ಅವನ ರತ್ನಖಚಿತವಾದ ಹಿಡಿಕೆಯ ಖಡ್ಗವನ್ನು

ತಂದೆಯಾದರೆ ಅವನ ಗರ್ವಭಂಗ ಮಾಡಿದಂತಾಗುವದು"

"ಮಹಾರಾಜರ ಅಪ್ಪಣೆಯು ಶಿರಸಾವಾನ್ಯವಿರುವದು" ಎಂದು ನುಡಿದು ಶ್ವೇತಸೇನನು:— "ಮಹಾರಾಜರೇ, ನೀವು ಹೀಗೆಯೇ ಕುಳಿತುಬಿಟ್ಟರೆ ಅಪಾಯವೇ ಇರುವದು. ನೀವು ಎಲ್ಲ ಸೈನ್ಯವನ್ನು ಇಂದಿನ ರಾತ್ರಿಯಲ್ಲಿಯೇ ರೇವಾನದಿಯನ್ನು ದಾಟಿಸಿರಿ. ಹರ್ಷವರ್ಧನನ ಶಿಬಿರದ ಪೂರ್ವದಿಕ್ಕಿಗೆ ನರ್ಮದಾನದಿಗೆ ಹೊಂದಿ ದೊಡ್ಡ ವನಪ್ರದೇಶವಿರುವದು. ಅಲ್ಲಿ ಸೈನ್ಯವನ್ನು ಒಯ್ದರೆ ಯಾರಿಗೂ ಗೊತ್ತಾಗುವದಿಲ್ಲ. ಮಧ್ಯರಾತ್ರಿಯೊಳಗಾಗಿ ನೀವು ಆ ವನದಲ್ಲಿ ಸೈನ್ಯವನ್ನು ತಂದರೆ, ರಾತ್ರಿಯಲ್ಲಿಯೆ ಕನೋಜೀಯರ ಮೇಲೆ ಬಿದ್ದು ಅವರನ್ನು ಪರಾಭವಗೊಳಿಸಲಿಕ್ಕೆ ಯೋಗ್ಯಸಂಧಿಯು ದೊರೆಯುವದು."

"ನೀನು ಹೇಳುವ ವನಕ್ಕೆ ಹರ್ಷವರ್ಧನನ ಶಿಬಿರಕ್ಕೂ ಬಹಳವಾದ ಅಂತರವಿದೆಯೇನು?"

"ಒಂದೆಗಡು ಕೂಗಳತೆ ಮಾತ್ರ ಅಂತರವಿದೆ. ಸದ್ದಿಲ್ಲದೆ ನೀವು ಸೈನ್ಯವನ್ನು ದಾಟಿಸಿದರೆ ವಿಜಯಶಾಲಿಗಳಾಗುವಿರಿ."

"ಇಷ್ಟು ಸೈನ್ಯವು ದಾಟಿ ಹೋಗಲಿಕ್ಕೆ ನೌಕೆಗಳು ಬಹಳೇ ಬೇಕಾಗುವವು. ಇಂದಿನ ರಾತ್ರಿಯಲ್ಲಿಯೇ ಎಲ್ಲ ಪೂರಣೆಯಾಗುವದು ಅಸಾಧ್ಯವಿರುವದು"

"ಮಹಾರಾಜರೆ, ನಾನು ಇಲ್ಲಿಗೆ ಬರುವಾಗ ಮುಂಜಾಗ್ರತೆಯಿಂದ ನಮ್ಮ ಶಿಬಿರದ ಪೂರ್ವದಿಕ್ಕಿಗೆ ಅಸಂಖ್ಯ ನೌಕೆಗಳನ್ನೂ, ನಾವಿಡಿಗರನ್ನೂ ತಂದು ಬಿಟ್ಟಿರುವೆನು. ನೀವು ಈಗಲೆ ಸೈನ್ಯವನ್ನು ಅಲ್ಲಿಗೆ ಕಳುಹಿಸಿರಿ. ನನಗೆ ಹೆಚ್ಚು ವೇಳೆಯ ವರೆಗೆ ನಿಲ್ಲಲಿಕ್ಕೆ ಅವಕಾಶವಿಲ್ಲ. ನನ್ನ ಮಾತಿನಲ್ಲಿ ಯಾವ ಬಗೆಯ ಸಂಶಯವನ್ನೂ ತೆಗೆದುಕೊಳ್ಳದೆ, ಕಾರ್ಯಪ್ರವೃತ್ತರಾಗಿರಿ. ನಾನು ನಿಮ್ಮ ಸಿಂಹಾಸನದ ಏಕನಿಷ್ಠ ಸೇವಕನೇ ಇರುವೆನೆಂದು ಜಗನ್ನಿಯಂತನನ್ನು ಸ್ಮರಿಸಿ ಹೇಳುವೆನು"

ರೈವತಸೇನನು ಹೀಗೆ ನುಡಿದು ಪುಲಿಕೇಶಿಯು ಚರಣಗಳಿಗೆ ನಮಿಸಿ, ಅಲ್ಲಿಂದ ಹೊರಟನು. ಅನಂತರದಲ್ಲಿ ಒಬ್ಬ ಸೇವಕನು ಅಲ್ಲಿಗೆ ಬಂದು:—

"ಮಹಾರಾಜರೆ, ನೌಕೆಗಳು ಸಿದ್ಧವಿರುವವು. ಬೇಗನೆ ಸೈನ್ಯವನ್ನು ಕಳುಹಿಸಬೇಕು. ಮಧ್ಯರಾತ್ರಿಯೊಳಗಾಗಿ ಎಲ್ಲ ಸೈನ್ಯವನ್ನು ಪೈಲತೀರಕ್ಕೆ ಮುಟ್ಟಿಸಬೇಕೆಂದು ಒಡೆಯರು ಆಜ್ಞಾಪಿಸಿರುವರು"

"ನಿನ್ನ ಒಡೆಯನಾರು?" ಎಂದು ಪುಲಿಕೇಶಿಯು ವಿಸ್ಮಿತನಾಗಿ ಕೇಳಲು, ಆ ನಾವಿಕನು:—"ರೈವತಸೇನರು!" ಎಂದಂದನು.

"ರೈವತಸೇನನು ನಿನ್ನ ಒಡೆಯನೆ?" ಎಂದು ಪುಲಿಕೇಶಿಯು ಸೋಜಿಗಗೊಂಡು ಕೇಳಿದನು.



## ಅಪೂರ್ವ ಮಹಾವಿಜಯ!

ರೈವತಸೇನನ ಕಾರ್ಯತತ್ಪರತೆಯನ್ನೂ, ಕರ್ತವ್ಯನಿಷ್ಠೆಯನ್ನೂ ನೋಡಿ ಪುಲಿಕೇಶಿಯು ಬೆರಗಾದನು. ಅವನು ಹೊಸಬನಿದ್ದು ಈ ಪರಿಯಾಗಿ ಸಾಹಸ ಮಾಡಿದ್ದನ್ನು ನೋಡಿ ಅವನಿಗೆ ಪರಮಾನಂದವಾಯಿತು. ಅವನನ್ನು ಎಲ್ಲಿಯೋ ನೋಡಿದಂತೆ ಪುಲಿಕೇಶಿಗೆ ಭಾಸವಾಗುತ್ತಿತ್ತು. ಧ್ವನಿಯು ಪರಿಚಯವಾದರೂ ಮಸಮಸಕಾಗಿ ತಿಳಿಯುತ್ತಿದ್ದಿತ್ತು; ಆದರೆ ಅವನು ಯಾವನೆಂಬುದರ ಗೊತ್ತುವಳಿಯಾಗಲೊಲ್ಲದು. ಹೆಸರಂತೂ ಅವನಿಗೆ ತೀರ ಅರಿಯದ್ದಾಗಿ ಕಾಣುತ್ತಿದ್ದುದರಿಂದ ಅವನ ಮನಸ್ಸು ಗೊಂದಲದಲ್ಲಿ ಬಿದ್ದಿತು ಅವನು ಶತ್ರುಪಕ್ಷದವನಿರಬಹುದೇನೆಂದು ಪುಲಿಕೇಶಿಯು ಸಂದೇಹಗೊಂಡನು. ಅವನು ಅಚ್ಚಕನ್ನಡಿಗನಿದ್ದುದರಿಂದಲೂ, ಹೋಗುವಾಗ ವಾತಾಪಿಪುರದ ರಾಜಪರಿವಾರದ ಹಾಗು ಅಲ್ಲಿಯ ಪ್ರಮುಖಜನರ ಹೆಸರುಗಳನ್ನು ಹೇಳಿದ್ದರಿಂದಲೂ, ಕೃತಪುರದೊಳಗಿನ ಪ್ರಮುಖ ಜನರ ಗೊತ್ತುವಳಿ ಕೊಟ್ಟಿದ್ದರಿಂದಲೂ ಪುಲಿಕೇಶಿಯು ಅವನಲ್ಲಿ ನಂಬಿಗೆಯುಳ್ಳವನಾದನು. ಅವನ ಧೂರ್ತತನದ ಸೂಚನೆಯಾದರೂ ಬಹು

ಗ್ರಾಹ್ಯವಾಗಿತ್ತು ರಾತ್ರಿಯ ವೇಳೆಯಲ್ಲಿ ನದಿಯನ್ನು ದಾಟಿ, ಬೆಳಗಾಗುವದರೊಳಗೆ ಹರ್ಷವರ್ಧನನ ಸೈನ್ಯದ ಮೇಲೆ ಬಿದ್ದರೆ, ತನಗೆ ಅಪೂರ್ವವಾದ ವಿಜಯವು ದೊರೆಯುವದೆಂದು ಅವನು ತಿಳಿದಿದ್ದನು. ಈ ಬಗೆಯಾಗಿ ಸಾಹಸ ಮಾಡಬೇಕೆಂದೂ ಅವನು ನಿಶ್ಚಯಿಸಿದ್ದನು. ಡೋಣಿ-ನೌಕೆಗಳ ಸಾಹಿತ್ಯವು ಒದಗಿ ತನ್ನ ಹಂಚಿಕೆಯು ಕೈಗೂಡಬೇಕಾದರೆ ಇನ್ನೂ ಎರಡು ದಿನಗಳ ಅವಧಿಯು ಬೇಕಾಗುವದೆಂದು ಅವನು ತಿಳಿದಿದ್ದನು. ಮೂರನೆಯ ದಿನದಿಂದ ಅವನು ನೌಕೆಗಳ ಸಿದ್ಧತೆಗಾಗಿ ತೊಡಗಬೇಕೆಂದಿದ್ದನು. ಅಲ್ಲಲ್ಲಿಯ ನಾವಿಕರನ್ನು ಕರೆಯಿಸಬೇಕೆಂದು ಅವನು ಪ್ರತಾಪನವರ್ಮನೆದುರಿಗೆ ಪ್ರಸ್ತಾಪವನ್ನಾದರೂ ತೆಗೆದಿದ್ದನು ರೈವತಸೇನನು ವಿಲಕ್ಷಣ ಸಾಹಸದಿಂದ ನೌಕೆಗಳನ್ನೊದಗಿಸಿ ತನಗೆ ಸಹಾಯ ಮಾಡಿದ್ದರಿಂದ, ಅವನ ವಿಷಯವಾಗಿ ಪುಲಿಕೇಶಿಯು ಸಂದೇಹಗೊಳ್ಳುವದಕ್ಕೆ ಮಾರ್ಗವಿರಲಿಲ್ಲ. ನೌಕೆಗಳು ಸಿದ್ಧವಿರುವವೆಂದು ನಾವಿಕನು ಹೇಳಿದೊಡನೆಯೇ ಅವನು ಸೇನಾಪತಿ-ಸರದಾರರನ್ನು ಕರೆಯಿಸಿದನು ಅವನು ಅವರಿಗೆ ರೈವತಸೇನನ ಆಗಮನದ ವಾರ್ತೆಯನ್ನೂ, ಅವನ ಹಂಚಿಕೆಯನ್ನೂ ತಿಳಿಸಿದನು. ಈ ವಿಲಕ್ಷಣವಾದ ಯುಕ್ತಿಯು ಎಲ್ಲ ಜನರ ಮನಸ್ಸಿಗೆ ಸಮಂಜಸವಾಗಿ ತೋರಿತು ಕೂಡಲೆ ಅವರು ಸೈನ್ಯವನ್ನು ಹೊರಡಿಸುವದಕ್ಕೆ ಸಜ್ಜಾದರು.

ಸಂಧ್ಯಾಸಮಯವಾಗಿತ್ತು. ಭಗವಾನ್ ಭಾಸ್ಕರನು ಪಶ್ಚಿಮಾಂಬುಧಿಯನ್ನು ಸೇರಿದ್ದನು. ಪುಲಿಕೇಶಿಯ ಸೈನ್ಯವು ನೌಕೆಗಳಲ್ಲಿ ಕುಳಿತು ನರ್ಮದಾ ನದಿಯನ್ನು ದಾಟಲಾರಂಭಿಸಿತ್ತು. ತನ್ನ ಪಡೆಯೊಳಗಿನ ಅರ್ಧಭಾಗವು ದಾಟಿದೊಡನೆಯೆ ಅಕಸ್ಮಾತ್ತಾಗಿ ಹರ್ಷವರ್ಧನನ ದಂಡಿನ ಮೇಲೆ ಬೀಳಬೇಕೆಂದು ಪುಲಿಕೇಶಿಯು ನಿರ್ಧರಿಸಿದ್ದನು. ನೌಕೆಗಳು ಹೇರಳವಾಗಿದ್ದರೂ ಅವನ ಸೈನ್ಯವನ್ನು ಒಮ್ಮೆಲೆ ಒಯ್ಯಲಿಕ್ಕೆ ಬರುವಷ್ಟಿರಲಿಲ್ಲ ಎಲ್ಲ ನೌಕೆಗಳು ನಾಲ್ಕೆಂಟು ಬಾರಿ ಹೋಗಿ ಬಂದರೆ ಅರ್ಧಸೇನೆಯು ಮಾತ್ರ ದಾಟುತ್ತಿತ್ತು. ಎಲ್ಲ

ಸೇನೆಯು ದಾಟುವ ವರೆಗೆ ಎಚ್ಚರರಾಗಿ ಕುಳಿತರೆ ಪ್ರಾತಃಕಾಲದ ವರೆಗೆ ವೇಳೆಯು ಹಿಡಿಯುವದೆಂದೂ, ಹಾಗಾದರೆ ಮುಂದಿನ ಕಾ-ರ್ಯವು ಮನಸ್ಸಿನಂತೆ ಈಡೇರಲಿಕ್ಕಿಲ್ಲವೆಂದೂ ತಿಳಿದು, ಪುಲಿಕೇಶಿಯು ಶೂರ ದಂಡಾಳುಗಳನ್ನಷ್ಟೇ ವೊದಲು ದಾಟಿಸಿ, ಯುದ್ಧವನ್ನು ಪ್ರಾರಂಭಿಸಬೇಕೆಂದು ಯೋಚಿಸಿದನು ಸಂಗ್ರಾಮವು ನಡೆದ ಮೇಲೆ ಅಲ್ಪ-ಸ್ವಲ್ಪ ಅವಕಾಶದಿಂದ ಉಳಿದ ಸೈನ್ಯವು ಬಂದರೂ ಅಡ್ಡಿಯಿಲ್ಲವೆಂದು ಅವನು ತಿಳಿದಿದ್ದನು

ಮಹಾಶಯ, ಪುಲಿಕೇಶಿಯ ಸೈನ್ಯವು ನದಿಯನ್ನು ದಾಟಲಿ. ಹರ್ಷವರ್ಧನನ ಪಾಳ್ಯದಲ್ಲಿ ಏನೇನು ನಡೆದಿರುವವೆಂಬದನ್ನು ತಿಳಿದುಕೊಳ್ಳುವದಕ್ಕಾಗಿ ಅಲ್ಲಿಗೆ ತೆರಳೋಣ; ನಡೆಯಿರಿ.

ಸುಮಾರು ಎಂಟು-ಹತ್ತು ಗಳಿಗೆಯು ರಾತ್ರಿಯಾಗಿರಬಹುದು. ಕೃಷ್ಣಪಕ್ಷವಿದ್ದುದರಿಂದ ಎಲ್ಲ ಕಡೆಯಲ್ಲಿ ದಟ್ಟವಾದ ಕತ್ತಲೆಯು ಮುಸುಕಿತ್ತು ಹರ್ಷವರ್ಧನನ ಪಾಳ್ಯದಲ್ಲಿ ಸೈನಿಕರು ಅದೇ ಊಟ-ಉಡಿಗೆಗಳನ್ನು ತೀರಿಸಿಕೊಂಡಿದ್ದರು ಅಂದಿನ ರಣದಲ್ಲಿ ಸೈನಿಕರು ಬಹಳವಾಗಿ ದಣಿದಿದ್ದರಿಂದ, ಬೇಗನೆ ವಿಶ್ರಾಂತಿ ಹೊಂದುವದು ಅವಶ್ಯವಾಗಿತ್ತು. ನಿಯಮಿತ ಕಾವಲುಗಾರರ ಹೊರತು, ಉಳಿದವರು ವಿಶ್ರಾಂತಿಪಡೆಯಬೇಕೆಂದು ರಾಜಾಜ್ಞೆಯಾಗಿತ್ತು. ಮಾರನೆಯ ದಿವಸ ರಣಕಂದನವು ನಡೆಯತಕ್ಕದ್ದಿದ್ದದರಿಂದ ದಂಡಾಳುಗಳು ಪೂರ್ಣ ವಿಶ್ರಾಂತಿ ಪಡೆಯುವದು ಅತ್ಯವಶ್ಯವಿತ್ತು. ಆದ್ದರಿಂದ ಹರ್ಷವರ್ಧನನು ಎಲ್ಲ ದಂಡಾಳುಗಳಿಗೆ ಎಂಟು-ಹತ್ತು ಗಳಿಗೆ ರಾತ್ರಿಯಾದೊಡನೆಯೇ ನಿದ್ರೆಗಾಗಿ ಬಿಡುವು ಕೊಟ್ಟಿದ್ದನು.

ಹರ್ಷವರ್ಧನನ ಪಾಳ್ಯದೊಳಗಿನ ಸೈನಿಕರು ನಿದ್ರಾಧೀನರಾಗಿದ್ದರು. ಎಲ್ಲ ಕಡೆಯಲ್ಲಿ ಶಾಂತತೆಯು ನೆಲೆಗೊಂಡಿತ್ತು. ಹರ್ಷವರ್ಧನನು ಮಾತ್ರ ಇನ್ನೂ ಎಚ್ಚರರಾಗಿಯೇ ಕುಳಿತಿದ್ದನು ಅಂದಿನ ರಣದಲ್ಲಿ ಪರಾಭವಹೊಂದಿದ್ದರಿಂದ ಅವನ ಮನಸ್ಸು ಖಿನ್ನವಾಗಿತ್ತು ಮಾರನೆಯ ದಿವಸ ಪುಲಿಕೇಶಿಯ ಸೈನ್ಯದ ಮೇಲೆ ಹೇಗೆ ಹೋಗ

ತಕ್ಕದ್ದು, ಅವನನ್ನು ಯಾವ ಬಗೆಯಿಂದ ಇಕ್ಕಟ್ಟಿನಲ್ಲಿ ತಗತಕ್ಕದ್ದು? ಮೊದಲಾದ ವಿಚಾರಗಳಲ್ಲಿ ಅವನು ಮುಳುಗಿದ್ದನು. ಸಹಸ್ರಾವಧಿ ಆನೆಗಳೂ ಎಷ್ಟೋ ಸಾವಿರ ಕುದುರೆಗಳೂ ಲಕ್ಷಗಟ್ಟಲೆ ಕಾಲಾಳುಗಳೂ ತನ್ನ ಪಡೆಯಲ್ಲಿದ್ದರೂ ಅಂದಿನ ಸಂಗ್ರಾಮದಲ್ಲಿ ಪರಾಜಯವನ್ನು ಹೊಂದಿದ್ದರಿಂದ ಅವನು ಸಖೇದಾಶ್ಚರ್ಯಗೊಂಡನು. ತನ್ನ ಪಾಳೆಯದ ಪೂರ್ವದಿಕ್ಕಿಗಿರುವ ಅರಣ್ಯದಿಂದ ಹಸ್ತಿಸೈನ್ಯವನ್ನೂ ಪಶ್ಚಿಮದಿಂದ ಅಶ್ವದಳವನ್ನೂ ತೆಗೆದುಕೊಂಡು ಹೋಗಿ ಪುಲಿಕೇಶಿಯನ್ನು ಇಕ್ಕಟ್ಟಿನಲ್ಲಿ ಕೆಡಹಿ ಹಣ್ಣು ಮಾಡಬೇಕೆಂದು ಅವನು ನಿರ್ಧರಿಸಿಕೊಂಡನು. ಅಷ್ಟರಲ್ಲಿ ಕಾವಲುಗಾರನೊಬ್ಬನು ಅವನ ಬಳಿಗೆ ಬಂದು:

"ಮಹಾರಾಜರೆ, ನಮ್ಮ ಸೈನಿಕರು ಒಬ್ಬ ಬೈರಾಗಿಯನ್ನು ಹಿಡಿದು ತಂದಿರುವರು. ಶತ್ರುಗಳ ಕಡೆಯ ಗುಪ್ತಚರನೆಂಬ ಸಂಶಯದಿಂದ ತಂದಿರುತ್ತೇವೆಂದು ಅವರು ಹೇಳುತ್ತಲಿರುವರು."

ಕಾವಲುಗಾರನು ಹೀಗೆ ಹೇಳಿದ ಕೂಡಲೆ ಹರ್ಷವರ್ಧನನು ಆ ಬೈರಾಗಿಯನ್ನು ತನ್ನ ಬಳಿಗೆ ಕರೆದುಕೊಂಡು ಬರುವದಕ್ಕಾಗಿ ಆ ಸೈನಿಕರಿಗೆ ತಿಳಿಸಬೇಕೆಂದು ಆಜ್ಞೆ ಮಾಡಿದನು. ಕೂಡಲೆ ನಾಲ್ಕು ಜನ ಕನೋಜಿಯರು ಆ ಬೈರಾಗಿಯನ್ನು ತಂದು ಅವನ ಸಮ್ಮುಖದಲ್ಲಿ ನಿಲ್ಲಿಸಿದರು.

"ಮಹಾರಾಜರೆ, ಈ ಬೈರಾಗಿಯು ಶತ್ರುಗಳ ಕಡೆಯ ಗುಪ್ತಚರನೆಂಬ ಸಂಶಯ ಬಂದದ್ದರಿಂದ ತಮ್ಮ ಸನ್ನಿಧಾನದಲ್ಲಿ ತಂದೆವು."

ಹರ್ಷವರ್ಧನನು ಆ ಬೈರಾಗಿಯನ್ನು ದಿಟ್ಟಿಸಿ ನೋಡಿ:—

"ಬೈರಾಗಿಯೆ, ನೀನು ಯಾರು? ನಮ್ಮ ಶಿಬಿರದ ಬಳಿಯಲ್ಲಿ ಇಂತಹ ಮಧ್ಯರಾತ್ರಿಯ ವೇಳೆಯಲ್ಲಿ ಬಂದ ಕಾರಣವೇನು? ನಿಜಸ್ಥಿತಿಯನ್ನರುಹದಿದ್ದರೆ ನೀನು ಇಲ್ಲಿಂದ ಬಿಡುಗಡೆ ಹೊಂದಲಾರೆ."

"ಮಹಾರಾಜರೆ, ನಾನು ಯಾರೆಂಬದನ್ನು ಬಾಯಿಯಿಂದ ಹೇಳಬೇಕಾಗಿಲ್ಲ. ಕ್ಷೇತ್ರ-ಯಾತ್ರೆಗಳನ್ನು ಮಾಡುತ್ತ ಕಾಲಹರಣ ಮಾಡುವ ನನ್ನನ್ನು ಗುಪ್ತದೂತನೆಂದು ತಿಳಿದುಕೊಳ್ಳುವದು ತೀರ

ಅನ್ಯಾಯವು. ನಾನು ಹರದ್ವಾರದವನು. ಕಾಶಿಯ ಯಾತ್ರೆಯನ್ನು ತೀರಿಸಿ, ರಾಮೇಶ್ವರಕ್ಕೆ ಹೊರಡಬೇಕೆಂದು ಮಾರ್ಗಕ್ರಮಣ ಮಾಡು ವಾಗ ದಾರಿ ತಪ್ಪಿ ಇಲ್ಲಿಗೆ ಬಂದೆನು. ಸರ್ವಸಂಗ ಪರಿತ್ಯಾಗಿಗಳಾದ ನಮ್ಮಂತಹ ಸಂತರಿಗೆ ಹಗಲೂ ಅಷ್ಟೆ; ರಾತ್ರಿಯೂ ಅಷ್ಟೇ. ಇಲ್ಲಿ ರಾಹುಟಿಗಳೂ ಮನೆಗಳೂ ಇರುವಂತೆ ಭಾಸವಾದ್ದರಿಂದ ಇದೊಂದು ಗ್ರಾಮವಿರಬಹುದೆಂದು ಭಾವಿಸಿ ಇಲ್ಲಿಗೆ ಬಂದೆನು. ಇದೇ ನನ್ನ ನಿಜಸ್ಥಿತಿಯು. ಇಂದಿನ ರಾತ್ರಿಯನ್ನು ಕಳೆಯುವದಕ್ಕಾಗಿ ನನಗೆ ಸ್ಥಳವಿತ್ತರೆ ಬಹಳೇ ಪುಣ್ಯವು ಲಭಿಸುವದು ''

ಆ ಬೈರಾಗಿಯ ತೇಜಸ್ವಿಯಾದ ಮುಖಮುದ್ರೆಯೂ ನಿರ್ಭಯ ವಾಣಿಯೂ ಸರಳವಾದ ಮಾತುಗಳೂ ಹರ್ಷವರ್ಧನನ ಮನಸ್ಸಿನ ಮೇಲೆ ಹಳ್ಳೇ ಪರಿಣಾಮವನ್ನುಂಟು ಮಾಡಿದವು ಆಗ ಅವನು ಭಕ್ತಿ-ವಿನಯಗಳಿಂದ: —

''ಸಾಧುಮಹಾರಾಜರೆ, ನನ್ನ ಸೇವಕರು ಅರಿಯದೆ ಉದ್ಧಾಮ ವೃತ್ತಿಯಿಂದ ಆಚರಿಸಿದ್ದನ್ನು ನೀವು ದೊಡ್ಡ ಮನಸ್ಸಿನಿಂದ ಕ್ಷಮಿಸಿರಿ. ನೀವು ಇಂದಿನ ರಾತ್ರಿಯನ್ನು ನನ್ನ ರಾಹುಟಿಯಲ್ಲಿಯೇ ಕಳೆದು, ಬೆಳಗಾಗುತ್ತಲೆ ಇಚ್ಛಿತ ಸ್ಥಳಕ್ಕೆ ಹೊರಡಿರಿ.''

''ಮಹಾತ್ಮರ ಮನಸ್ಸು ಮಹತ್ತರವಾದದ್ದಿರುತ್ತದೆಂಬದು ಸುಳ್ಳಲ್ಲ. ಮಹಾರಾಜರೆ, ಸೇವಕರ ಮಾತಿನಲ್ಲಿ ವಿಶ್ವಾಸವಿಟ್ಟು ಸಂತ ವಿಟಂಬನೆಯ ಕೃತಿಯು ಘಟಿಸುವದೆಂದು ಬೆದರಿದ್ದೆನು. ನಿಮ್ಮಂ ತಹರ ಕೈಯಿಂದ ಅನುಚಿತ ಕೃತಿಯು ಹೇಗೆ ಘಟಿಸೀತು?''

ಬೈರಾಗಿಯು ಹೀಗೆ ನುಡಿಯುತ್ತ, ತನ್ನ ಕಂಕುಳದೊಳಗಿನ ವ್ಯಾಘ್ರಾಜಿನವನ್ನು ನೆಲದ ಮೇಲೆ ಹಾಸಿ, ಅದರ ಮೇಲೆ ಕುಳಿತು ಕೊಂಡನು. ಆಗ ಹರ್ಷವರ್ಧನನು ಆ ಬೈರಾಗಿಯನ್ನು ಕುರಿತು:—

''ಪಥಶ್ರಮದಿಂದ ಬಹಳೇ ದಣಿದಂತೆ ಕಾಣುವದು ಇನ್ನು ನೀವು ವಿಶ್ರಮಿಸಿರಿ ''

ಬೈರಾಗಿಯು ವ್ಯಾಘ್ರಾಜಿನದ ಮೇಲೆ ಒರಗಿದನು. ಹರ್ಷ

ವರ್ಧನನಾದರೂ ತನ್ನ ಸುವರ್ಣಖಚಿತ ಮಂಚಕದ ಮೇಲೆ ಮಲಗಿದನು ಸ್ವಲ್ಪ ಹೊತ್ತಿನಲ್ಲಿ ಹರ್ಷವರ್ಧನನು ನಿದ್ರಾಧೀನನಾದನು. ಬೈರಾಗಿಯು ಮಾತ್ರ ಎಚ್ಚರಾಗಿಯೇ ಇದ್ದನು. ಅವನು ರಾಹುಟಿಯೊಳಗಿನ ದೀವಿಗೆಯ ಬೆಳಕಿನಲ್ಲಿ ಅತ್ತಿತ್ತ ನೋಡತೊಡಗಿದ್ದನು. ಹರ್ಷವರ್ಧನನು ಚನ್ನಾಗಿ ನಿದ್ರಾಧೀನನಾಗಿರುವನೆಂಬದು ಅವನಿಗೆ ತಿಳಿದ ಕೂಡಲೆ ತನ್ನ ವ್ಯಾಘ್ರಾಸನದಿಂದೆದ್ದು ಅವನು ಮಂಚಕದ ಬಳಿಗೆ ಹೋದನು ಅಲ್ಲಿಯೇ ಮಂಚಕದ ಮೇಲಿದ್ದ ಅವನ ರತ್ನಖಚಿತವಾದ ಹಿಡಿಯ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ತನ್ನ ಕಫನಿಯಲ್ಲಿ ಬಚ್ಚಿಟ್ಟಿದ್ದ ಪತ್ರವನ್ನು ಅವನ ಮುಕಟಕ್ಕೆ ಕಟ್ಟಿ ಅಲ್ಲಿಂದ ಹೊರಬಿದ್ದನು.

ಬೈರಾಗಿಯು ರಾಹುಟಿಯಿಂದ ಹೊರಬಿದ್ದನ್ನು ನೋಡಿ ಕಾವಲುಗಾರರು ವಿಸ್ಮಯದಿಂದ:—"ಯಾಕೆ ಬೈರಾಗಿಗಳೇ, ಹೊರಟಿರಿ? ಇನ್ನೂ ರಾತ್ರಿಯು ಬಹಳಿರುವದು."

"ಇಲ್ಲ, ಬೆಳಗು ಬಂದಂತೆ ತೋರುವದು. ತಂಪಾದ ವೇಳೆಯಲ್ಲಿ ಮಾರ್ಗಕ್ರಮಣದಿಂದ ದಣಿವಾಗುವದಿಲ್ಲವಾದ್ದರಿಂದ ನಾನು ನಿತ್ಯದಲ್ಲಿಯೂ ಇಂತಹ ವೇಳೆಯಲ್ಲೇ ದಾರೀ ನಡೆಯುತ್ತಿರುವೆನು. ನಾನೀಗ ರಾಜಾಜ್ಞೆಯನ್ನು ಹೊಂದಿಯೇ ಹೊರಟಿರುವೆನು."

ಹರ್ಷವರ್ಧನನು ಆ ಬೈರಾಗಿಗೆ ವಿಶೇಷವಾಗಿ ಸನ್ಮಾನವಿತ್ತದ್ದರಿಂದ ಕಾವಲುಗಾರರು ಅವನಿಗೆ ಯಾವ ಬಗೆಯ ತೊಂದರೆಯನ್ನೂ ಕೊಡದೆ ಹೋಗಗೊಟ್ಟರು. ಅವನು ಶಿಬಿರವನ್ನು ಬಿಟ್ಟು ಹೋದ ಒಂದು ಗಳಿಗೆಯೊಳಗಾಗಿ ಅಲ್ಲಿ ಭಯಂಕರವಾದ ಕೋಲಾಹಲವೇ ಎದ್ದಿತು ಈ ಕೋಲಾಹಲವು ರಾಹುಟಿಯಲ್ಲಿ ಮಲಗಿದ ಹರ್ಷವರ್ಧನನನ್ನು ಎಚ್ಚರಿಸಿತು. ಕೂಡಲೆ ಅವನು ತನ್ನ ಖಡ್ಗವನ್ನು ತೆಗೆದುಕೊಳ್ಳಬೇಕೆಂದು ಮಂಚಕದ ಮೇಲೆ ಕೈಯಾಡಿಸಿದನು; ಅಲ್ಲಿ ಅವನ ಖಡ್ಗವೇ ಇದ್ದಿಲ್ಲ ಆಗ ಅವನು ತನ್ನ ಮುಕುಟವನ್ನು ತೆಗೆದುಕೊಂಡು ತಲೆಯ ಮೇಲಿರಿಸಿಕೊಳ್ಳುವಾಗ ಅದಕ್ಕೆ ಒಂದು ಪತ್ರ

ವನ್ನು ಕಟ್ಟಿದಂತೆ ಭಾಸವಾಯಿತು. ಅವನು ಆ ಮುಕುಟಕ್ಕೆ ಕಟ್ಟಿದ ಪತ್ರಿಕೆಯನ್ನು ಬಿಚ್ಚಿ ಓದಲಾರಂಭಿಸಿದನು:—

"ಹರ್ಷವರ್ಧನರೆ,

ನೀವು ಒಳ್ಳೆಯ ವಿಕ್ರಮಶಾಲಿಗಳಲ್ಲವೆ? ನೀವು ನಿಮ್ಮ ಶಕ್ತಿಯ ಉನ್ಮತ್ತತನದಿಂದ ನಮ್ಮ ಸಾರ್ವಭೌಮರಿಗೆ ಮುಕುಟವನ್ನು ತಂದೊಪ್ಪಿಸಬೇಕೆಂದು ಸಂದೇಶ ಕಳುಹಿಸಿದ್ದಿರಲ್ಲವೆ? ನಿಮ್ಮ ಮಾತುಗಳು ತೀರ ಅನೀತಿಯುವಿರುವವೆಂದು ಬೇರೆ ಹೇಳಲಾರೆನು. ನಿಮ್ಮಂತೆ ಪುಲಿಕೇಶಿ ಮಹಾರಾಜರೂ ಒಬ್ಬ ಸಾರ್ವಭೌಮರಾಗಿರಲು, ಅವರಿಗೆ ಮುಕುಟವನ್ನು ಒಪ್ಪಿಸಬೇಕೆಂಬ ಅಪಮಾನಕಾರಕ ನಿರೋಪವನ್ನು ಕಳುಹಿಸಿದ್ದಕ್ಕಾಗಿ ಅವರ ಸೇವಾವೃತ್ತಿಯಲ್ಲಿದ್ದ ನಾನು ಈ ಅಲ್ಪವಾದ ಸಾಹಸ ಮಾಡಿರುವೆನು. ನನಗೆ ನಿಮ್ಮ ಮುಕುಟವನ್ನಾಗಲಿ, ಮುಕುಟಸಹಿತವಾದ ಶಿರವನ್ನಾಗಲಿ ಒಯ್ದು ನಮ್ಮ ಮಹಾರಾಜರಿಗೆ ಒಪ್ಪಿಸುವದು ಎಷ್ಟೇನೂ ಅಸಾಧ್ಯವಾದ ಮಾತಾಗಿರಲಿಲ್ಲ. ಹಾಗೆ ಮಾಡುವದು ದ್ರೋಹವೂ ಅನ್ಯಾಯವೂ ಎಂದು ನನ್ನ ಮಹಾರಾಜರ ಮನಸ್ಸಿಗೂ ನನ್ನ ಮನಸ್ಸಿಗೂ ತೋರಿದ್ದರಿಂದ, ನಿಮ್ಮ ಖಡ್ಗವನ್ನು ಮಾತ್ರ ಒಯ್ದಿರುವೆನು. ಪುಲಿಕೇಶಿ ಮಹಾರಾಜರ ಕರ್ನಾಟಕ ಸಾಮ್ರಾಜ್ಯದೊಳಗಿನ ಒಬ್ಬ ಕನ್ನಡಿತಿಯು-ಅಬಲೆಯು-ಇಂತಹ ಸಾಹಸವನ್ನೂ ಶೂರತನವನ್ನೂ ಮಾಡುತ್ತಿರುವಾಗ, ಆ ಮಹಾರಾಜರ ಸೇನಾಪತಿಗಳ ಹಾಗು ಸೇನೆಯ ಯೋಗ್ಯತೆಯೆಷ್ಟಿರುವದೆಂಬದನ್ನು ವಿಚಾರಿಸಿ ಯುದ್ಧ ಪ್ರವೃತ್ತರಾಗಿರಿ!

ಒಬ್ಬ ಕನ್ನಡಿತಿ."

ಹರ್ಷವರ್ಧನನು ಈ ಪತ್ರವನ್ನೋದಿ ದಂಗು ಬಡೆದನು. ಬೈರಾಗಿಯೇ ಈ ಕೃತಿಯನ್ನು ಮಾಡಿರುವನೆಂದು ಅವನ ಲಕ್ಷ್ಯದಲ್ಲಿ ಬಂದಿತು. ಆಗ ಅವನು ತನ್ನ ಸೇವಕರಿಗೆ ಒಳಿತಾಗಿ ಸಿಟ್ಟು ಮಾಡಿದನು. ತನ್ನ ಆಜ್ಞೆಯಿಲ್ಲದೆ ಅವನನ್ನು ಹೊರಗೆ ಬಿಟ್ಟ ಅಪರಾಧಕ್ಕಾಗಿ ಸೇವಕರಿಗೆ ದಂಡನೆ ವಿಧಿಸಲು ಸಮಯವೆಲ್ಲಿ?

"ಶತ್ರುಸೈನ್ಯವು ಬಂದಿತು! ಅಯ್ಯೋ! ಸತ್ತೆವು!" ಎಂಬ ಆರ್ತ ಧ್ವನಿಯು ಎಲ್ಲ ಕಡೆಯಲ್ಲಿಯೂ ಕೇಳಲಾರಂಭಿಸಿತು. ಕೂಡಲೆ ಹರ್ಷವರ್ಧನನು ಅಶ್ವವನ್ನೇರಿ ಸೇನಾಪತಿಗಳನ್ನು ಎಚ್ಚರಿಸುವದಕ್ಕಾಗಿ ಹೊರಟನು ನಿದ್ರಾಧೀನರಾಗಿ ಅಸ್ತವ್ಯಸ್ತ ಬಿದ್ದಿದ್ದ ಸೈನಿಕರನ್ನು ಎಚ್ಚರಗೊಳಿಸಲಿಕ್ಕೆ ಅವನು ಕಾವಲುಗಾರರಿಗೆ ಆಜ್ಞಾಪಿಸಿದನು.

ಪುಲಿಕೇಶಿಯ ಸೈನ್ಯವು ಸಾಗಿ ಬಂದಿರುವದೆಂದು ಹರ್ಷವರ್ಧನನ ದಂಡಿನವರಿಗೂ, ಸೇನಾಪತಿಗಳಿಗೂ ಮನವರಿಕೆಯಾಯಿತು. ಸ್ಕಂದಗುಪ್ತನು ತನ್ನ ಹಸ್ತಿಸೈನ್ಯವನ್ನು ಸಿದ್ಧಪಡಿಸತೊಡಗಿದನು; ಸಿಂಹನಾದನು ಅಶ್ವದಳವನ್ನು ಸಜ್ಜು ಮಾಡಲಾರಂಭಿಸಿದನು; ಕಾಲಾಳುಗಳನ್ನು ಭಂಡಿಯು ಯುದ್ಧಕ್ಕೆ ಅಣಿಮಾಡಹತ್ತಿದನು.

ಅರುಣೋದಯ ಸಮಯವಾಗಿತ್ತು. ಪ್ರಾಚ್ಯದಿಸೆಯು ಅರುಣೋದಯವಾಗುವ ಪೂರ್ವಚಿಹ್ನವನ್ನು ಹೊಂದಿತ್ತು. ಪ್ರಾತಃಕಾಲದ ತಂಗಾಳಿಯು 'ಸುಳ್ಳನೆ' ಸುಳಿಯತೊಡಗಿತ್ತು. ಪುಲಿಕೇಶಿಯ ಸೈನ್ಯವು ಅಕಸ್ಮಾತ್ತಾಗಿ ಹರ್ಷವರ್ಧನನ ಸೈನ್ಯದ ಮೇಲೆ ಬಿದ್ದು ಕೋಲಾಹಲವನ್ನೆಬ್ಬಿಸಿತ್ತು. ಆ ಕನ್ನಡ ಕಲಿಯು ಆಸರಿಕೆ-ಬೇಸರಿಕೆಗಳಿಲ್ಲದೆ ವೀರಾವೇಶದಿಂದ ಕಾದತೊಡಗಿದ್ದನು. ಎರಡೂ ಸೈನ್ಯಗಳು ಕೈಗೊಟ್ಟು ಕಾದಲಾರಂಭಿಸಿದ್ದವು. ಸೂರ್ಯೋದಯವಾಯಿತು. ಉಭಯ ಸೈನಿಕರು ಅತ್ಯಂತ ವೀರಾವೇಶದಿಂದ ಕಾದತೊಡಗಿದ್ದರು ಹೆಣಗಳು ರಾಶಿರಾಶಿಯಾಗಿ ಬೀಳತೊಡಗಿದ್ದವು ನೆತ್ತರವು ಕರುವುಗಟ್ಟಿ ಹರಿದು ನರ್ಮದಾ ನದಿಯನ್ನು ಕೂಡತೊಡಗಿತ್ತು. ಮಧ್ಯಾಹ್ನದ ಸಮಯವಾಗುತ್ತ ಬಂದಿದ್ದರೂ ಇಂತಹರಿಗೇ ಜಯವು ದೊರೆಯುವದೆಂಬದು ಇನ್ನೂ ತಿಳಿದಿರಲಿಲ್ಲ.

ಪುಲಿಕೇಶಿಯು ತನ್ನ ಅರ್ಧ ಸೈನ್ಯವನ್ನು ರೈವತಸೇನನ ಕಡೆಗೆ ಕೊಟ್ಟು ಬಳಿಯ ಅರಣ್ಯದಲ್ಲಿರಿಸಿದ್ದನು. ಯುದ್ಧದ ಲಕ್ಷಣವನ್ನು ತಿಳಿದು ಶತ್ರುಗಳ ಹಿಂದಿನಿಂದ ದಾಳಿಮಾಡಬೇಕೆಂದು ಅವನು ರೈವತಸೇನನಿಗೆ ಹೇಳಿದ್ದನು. ಮಧ್ಯಾಹ್ನವಾಗುತ್ತ ಬಂದಿದ್ದರೂ ಇನ್ನೂ

ಹರ್ಷವರ್ಧನನ ಸೈನ್ಯವು ಹಿಂಜರಿಯುದ್ದರಿಂದ ತನ್ನ ಸೈನ್ಯದೊಡನೆ ಸಾಗಿ ಹೋಗಿ ಅದನ್ನು ನುಗ್ಗು ಮಾಡಬೇಕೆಂದು ಅವನು ತನ್ನ ಸೇನೆಯನ್ನು ಸಾಗಿಸಿದನು. ಪುಲಿಕೇಶಿಯು ಪೂರ್ವದಿಕ್ಕಿನಲ್ಲಿ ಹರ್ಷವರ್ಧನನೊಡನೆ ತುಮುಲವಾದ ಸಂಗ್ರಾಮವನ್ನು ನಡೆಯಿಸಿದ್ದನು. ರೈವತಸೇನನು ಪಶ್ಚಿಮ ದಿಕ್ಕಿನಿಂದ ಸಾಗಿ ಹೋಗಿ ಒಮ್ಮೆಲೆ ಅವನ ಸೈನ್ಯದ ಮೇಲೆ ಬಿದ್ದನು ನವ್ಯಸ್ಫೂರ್ತಿಯ ರೈವತಸೇನನ ಹೊಡತಕ್ಕೆ ಹರ್ಷವರ್ಧನನ ಸೈನ್ಯವು ಬಹಳೇ ಹಣ್ಣಾಯಿತು. ಸಹಾಯಕ ಸೇನೆಯು ಬಂದಿರುವದೆಂದು ತಿಳಿದೊಡನೆಯೆ ಪುಲಿಕೇಶಿಯ ಸೈನ್ಯವು ದ್ವಿಗುಣಿತ ವೀರಾವೇಶದಿಂದ ಕಾದತೊಡಗಿತು. ಎರಡೂ ಕಡೆಯ ಹೊಡತದಿಂದ ಹರ್ಷವರ್ಧನನ ಸೈನ್ಯವು ಜರ್ಜರಿತವಾಯಿತು. ಆಗ ಅವನ ಸೈನ್ಯದಲ್ಲಿ ಹಾ-ಹಾಕಾರ ಹುಟ್ಟಿತು. ಅವನ ಸೈನಿಕರು ಎದೆಯೊಡಕೊಂಡು ಪಲಾಯನ ಸೂಕ್ತವನ್ನು ಪಠಿಸಲಾರಂಭಿಸಿದರು. ಹರ್ಷವರ್ಧನನೂ ಅವನ ದಳವಾಯಿಗಳೂ ಎಷ್ಟು ಅಂಗಲಾಚಿ ಬೇಡಿಕೊಂಡರೂ ಅವರು ಕಾದಲಿಕ್ಕೆ ಎದೆಗೊಳ್ಳಲಿಲ್ಲ. ಕಡೆಗೆ ಹರ್ಷವರ್ಧನನೂ ಅವನ ದಳವಾಯಿಗಳೂ ಸೈನಿಕರೂ ಜೀವವುಳಿಸಿಕೊಂಡು ಪಾರಾಗಬೇಕಾದರೆ ಸಾಕು ಸಾಕಾಯಿತು! ವಿಜಯಾನಂದದಿಂದ ಪ್ರಮತ್ತರಾದ ವೀರಕನ್ನಡಿಗರು ತಮಗೆ ದೊರೆತ ಬೆಲೆಯುಳ್ಳ ಅಪಾರ ಸುಲಿಗೆಯನ್ನು ಹೊತ್ತುಕೊಂಡು ಪಾಳೆಯಕ್ಕೆ ಮರಳಿ ಬಂದರು. ಹರ್ಷವರ್ಧನನ ಸೈನಿಕರು ನರ್ಮದೆಯ ಬಳಿಯಲ್ಲಿ ನಿಲ್ಲಲಿಲ್ಲ; 'ಸತ್ತೆ-ಕೆಟ್ಟೆವೆ'ನ್ನುತ್ತ ಕನ್ಯಕುಬ್ಜದ ದಾರಿಯನ್ನು ಹಿಡಿದವರು ತಿರುಗಿ ದಕ್ಷಿಣದ ಕಡೆಗೆ ಹೊರಳಿ ಸಹ ನೋಡದೆ ಪಲಾಯನ ಮಾಡಿದರು!

ಈ ನರ್ಮದಾ ಹೊಳೆಯ ಕಾಳಗವು ನಮ್ಮ ತಾಯ್ನಾಡಿನ ಇತಿಹಾಸದಲ್ಲಿ ಅತಿ ಮಹತ್ವದ ಕಾಳಗವೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ ಇಷ್ಟು ದಿವಸಗಳ ವರೆಗೆ 'ದಕ್ಷಿಣಾತ್ಯರು ಹೇಡಿಗಳು; ಕಾಡು ಜನರು' ಎಂದು ಉತ್ತರಾಪಥದವರು ಭಾವಿಸಿದ್ದರು ಕಾಡು ಜನರ ಕಾಡುಕಲಿತನದಿಂದ ಅವರ ಈ ತಿಳುವಳಿಕೆಯು ದೂರಾದದ್ದು

ಲ್ಲದೆ, ಕನ್ನಡಿಗರ ಶೌರ್ಯಔದಾರ್ಯಗಳ ಕೀರ್ತಿಯು ಉತ್ತರಾಪಥ ದಲ್ಲೆಲ್ಲ ಹಬ್ಬಿತು. ಈ ಅಪೂರ್ವವಾದ ಮಹಾವಿಜಯದಿಂದ ನರ್ಮದಾನದಿಯೇ ಕರ್ನಾಟಕ ಸಾಮ್ರಾಜ್ಯದ ಉತ್ತರ ಮೇರೆಯಾಯಿತು!

ಹರ್ಷವರ್ಧನನ ಸೇನೆಯು ಪಲಾಯನ ಮಾಡಿದ ಕೂಡಲೆ ಪುಲಿಕೇಶಿಯು ಅದನ್ನು ಬೆನ್ನಟ್ಟ ಹೋಗುವದು ಕ್ಷೇಮಕರವಲ್ಲೆಂದು ತಿಳಿದನು. ಇಷ್ಟರಿಂದಲೇ ಕನ್ನಡಿಗರನ್ನು ಎಂದೂ ಕೆಣಕಬಾರದೆಂದು ಹರ್ಷವರ್ಧನನು ಬುದ್ಧಿಗಲಿತಿರುವನಾದ್ದರಿಂದ, ಹೆಚ್ಚಿನ ಕಾರ್ಯವನ್ನು ಮಾಡಬೇಕೆಂಬ ಇಚ್ಛೆಯು ಅವನಿಗಾಗಲಿಲ್ಲ. ಹರ್ಷವರ್ಧನನಿಗೆ ತಾನು ಹೇಳಿದಂತೆ ನರ್ಮದಾ ನದಿಯ ತೆಂಕಲಿನ ಎಲ್ಲ ಸೀಮೆಗಳನ್ನು ಒಂದುಳಿಯದಂತೆ ಸ್ವವಶ ಮಾಡಿಕೊಂಡು ತನ್ನ ಮಾತಿನ ಸತ್ಯತೆಯನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡಬೇಕೆಂದು ವರ್ಧಮಾನಜಯತೃಷ್ಣೆಯವನಾದ ಅವನ ಮನಸ್ಸಿನಲ್ಲಿ ಹುಟ್ಟಿತು.

ನರ್ಮದಾನದಿಯ ಅಪೂರ್ವ ಮಹಾವಿಜಯದಿಂದ ಆನಂದಗಿರಿಯ ಉಚ್ಚ ಶಿಖರದ ಮೇಲೇರಿದ ಕನ್ನಡಿಗರು ವಿಜಯಭೇರಿಯನ್ನು ಹೊಡೆಯಿಸುತ್ತ ದಿಗ್ವಿಜಯಕ್ಕೆ ತೆರಳಿದರು!

## ವಿಜಯ ಯಾತ್ರೆ.

"ರೈವತಸೇನಾ, ನರ್ಮದಾನದಿಯ ಕಾಳಗದಲ್ಲಿ ದೊರಕಿದ ವಿಜಯದ ಶ್ರೇಯದ ಬಹ್ವಂಶವು ನಿನ್ನದಿರುವದು ನೀನು ನನಗೆ ಸಮಯೋಚಿತವಾದ ಹಂಚಿಕೆಯನ್ನು ಹೇಳದಿದ್ದರೆ ಇಷ್ಟು ಬೇಗನೆ ಯುದ್ಧದ ನಿರ್ಣಯವಾಗುತ್ತಿದ್ದಿಲ್ಲ."

"ಮಹಾರಾಜರೆ, ತಾವು ಹೀಗೆ ಹೇಳುವದಕ್ಕೆ ಈ ಚರಣಸೇವಕನ ಮೇಲಿನ ಅನುರಾಗವೇ ಕಾರಣವಾಗಿರುವದು. ಮಹಾರ್ಘ-ಮಹಾರ್ಘ ಅತಿರಥಿಮಹಾರಥಿಕರು ತಮ್ಮಲ್ಲಿರಲು, ಯಃಕಶ್ಚಿತ ಸೇವಕನಾದ ನನ್ನ ಪ್ರತಿಷ್ಠೆಯೇನು? ಹೊಸಬನಾದ ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು, ನಾನು ಹೇಳಿದ ಮೇರೆಗೆ ನಡೆದದ್ದರಿಂದ ಪರಮಾನಂದವಾಗಿದೆ."

"ನಿಜವಾಗಿ ವಿಚಾರಿಸಿದರೆ ನಿಮ್ಮ ಮಾತನ್ನು ನಂಬುವಂತಹ ಪರಿಸ್ಥಿತಿಯು ಆಗ ಇದ್ದಿಲ್ಲ; ಅಪರಿಚಿತ ಆಗಂತುಕನಾದ ನಿನ್ನನ್ನು ನಂಬಿ, ಇಂತಹ ದೀರ್ಘಸಾಹಸವನ್ನು ಹೇಗೆ ಕೈಕೊಂಡೆನೋ? ಎಂದು ಈಗ ನನಗೆ ಆಶ್ಚರ್ಯವೆನಿಸತೊಡಗಿರುವದು."

"ತಮಗೆ ಅಪೂರ್ವ ಮಹಾವಿಜಯದ ಯೋಗವಿದ್ದುದರಿಂದ ನನ್ನಲ್ಲಿ ತಾವು ಹಿವ್ಮೇಲೆ ವಿಶ್ವಾಸವಿಟ್ಟಿರಿ"

"ರೈವತಸೇನಾ, ನೀನು ಮೊದಲೇ ನೌಕೆಗಳನ್ನು ಸಿದ್ಧಪಡಿಸಿದ್ದೆಯೆಂಬಂತೆ ತೋರುವದು."

'ನಾನು ನರ್ಮದಾತೀರವನ್ನು ತಲುಪಿದೊಡನೆಯೆ ಮೊದಲು ಹರ್ಷವರ್ಧನನ ಸೇನೆಯ ಬಲವನ್ನು ತಿಳಿದುಕೊಳ್ಳಬೇಕೆಂದು ಅವನ ಶಿಬಿರವನ್ನು ಹೊಕ್ಕೆನು. ಅಲ್ಲಿ ಒಂದು ದಿನವಿದ್ದು, ಸೇನೆಯ ಚಲನವಲನವನ್ನು ತಿಳಿದುಕೊಂಡೆನು. ಆ ಸೇನೆಯು ಬೀಡು ಬಿಟ್ಟ ಸ್ಥಳದ ಪೂರ್ವದಿಕ್ಕಿಗೆ ದಟ್ಟವಾದ ಅರಣ್ಯವಿದ್ದು, ಆ ಅರಣ್ಯದಲ್ಲಿ ಗುಪ್ತರೀತಿಯಿಂದ ದಂಡನ್ನು ತಂದರೆ, ಹರ್ಷವರ್ಧನನನ್ನು ಹಣಿಯಲಿಕ್ಕೆ ಸುಲಭವಾಗುವದೆಂದು ನನ್ನ ಮನಸ್ಸಿನಲ್ಲಿ ವಿಚಾರೋದಯವಾಯಿತು ಕೂಡಲೆ ನಾನು ನದೀತೀರದಲ್ಲಿ ಸಂಚರಿಸಿ ಸಾಧ್ಯವಾದಷ್ಟು ನೌಕೆಗಳನ್ನು ಸಂಗ್ರಹಿಸಿ ತಮ್ಮ ಬಳಿಗೆ ಬಂದೆನು. ಮುಂದಿನ ಎಲ್ಲ ಸಂಗತಿಗಳು ತಮಗೆ ವಿದಿತವಿರುವವೆ"ಂದು ರೈವತಸೇನನು ನುಡಿದು, ಒಂದು ಖಡ್ಗವನ್ನು ಪುಲಿಕೇಶಿಯ ಮುಂದೆ ಇಟ್ಟು:—"ಮಹಾರಾಜರೆ, ಇದೇ ಹರ್ಷವರ್ಧನನ ಖಡ್ಗವು! ಬರೇ ಖಡ್ಗವನ್ನೇ ಏಕೆ, ಅವನ ಶಿರವನ್ನೂ ಮುಕುಟವನ್ನೂ ತರುವದು ನನಗೆ ಸಾಧ್ಯವಿತ್ತು. ಕನ್ನಡಿಗರು ಕಪಟಾಚರಣೆ ಮಾಡಲಾರರೆಂಬದನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಡುವದಕ್ಕಾಗಿ ಅವನ ಖಡ್ಗವನ್ನು ಮಾತ್ರ ತಂದಿರುವೆನು"

ರೈವತಸೇನನು ಹೀಗೆ ನುಡಿದ ಕೂಡಲೆ ಪುಲಿಕೇಶಿಯು ಪರಮ ವಿಸ್ಮಿತನಾದನು. ಅವನು ಹರ್ಷವರ್ಧನನ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು:—"ಶಾಬಾಸ್! ಕನ್ನಡವೀರಾ, ಶಾಬಾಸ್!"ಎಂದು

ಧನ್ಯೋದ್ಗಾರ ತೆಗೆದನು. ಅನಂತರದಲ್ಲಿ ಅವನು ಸೇನಾಪತಿಯಾದ ಪ್ರತಾಪವರ್ಮನನ್ನೂ ಮಂತ್ರಿಯಾದ ವೀರಸೇನನನ್ನೂ ಕರೆಯಿಸಿ, ರೈವತಸೇನನ ಅಲೌಕಿಕವಾದ ಸಾಹಸವನ್ನು ಬಹು ಪರಿಯಾಗಿ ಬಣ್ಣಿಸಿದನು. ವೀರಸೇನನು ರೈವತಸೇನನನ್ನು ದಿಟ್ಟಿಸಿ ನೋಡಲಾರಂಭಿಸಿದನು. ಅವನಿಗಾದರೂ ಆ ವೀರ ಕನ್ನಡಿಗನ ಮುಖವು ಪರಿಚಯದ್ದಾಗಿ ಕಾಣತೊಡಗಿತು. ಆಗ ಅವನು:—"ಕುಮಾರಾ, ನೀನು ಯಾರು?"

ರೈವತಸೇನನು ಮುಖವನ್ನು ಬಾಗಿಸಿ ಕುಳಿತಿದ್ದನು. ಆಗ ಅವನ ವದನವು ಘರ್ಮಬಿಂದುಗಳಿಂದ ಕೂಡಿದ್ದಾಗಿತ್ತು. ಯಾವದೋ ಹಿಂದು ಬಗೆಯ ಭಯದಿಂದ ಮುಖವು ಆರಕ್ತವಾದಂತೆ ಕಾಣುತ್ತಿತ್ತು. ಪ್ರಧಾನಿಯ ಮಾತಿಗೆ ಉತ್ತರ ಕೊಡಬೇಕಾದರೆ ಅವನ ಧ್ವನಿಯು ನಡುಗಲಾರಂಭಿಸಿತು.

"ಅಮಾತ್ಯರೆ, ನಾನು ಕೃತಪುರದವನು."

"ಅಮಾತ್ಯಪುತ್ರಿ! ನೀನು ಕೃತಪುರದವಳೋ? ಕೃತಕಪುರದವಳೋ?" ಎಂದು ನುಡಿದು, ಹರ್ಷೋನ್ಮಾದದಿಂದ ಎಚ್ಚರದಪ್ಪಿದ ವೀರಸೇನನು ಅಲ್ಲಿಂದ ಎದ್ದು, ರೈವತಸೇನನನ್ನು ದೃಢವಾಗಿ ಆಲಿಂಗಿಸಿ:—"ರೇವತೀ, ನನ್ನ ವಾತ್ಸಲ್ಯದ ಕುಮಾರಿಯಾದ ರೇವತೀ! ವೀರಪುತ್ರಿಯಾದ ರೇವತಿ! ಆದರ್ಶ ಆರ್ಯಾಂಗನೆಯಾದ ರೇವತಿ! ವೀರ ಕನ್ನಡಿತಿಯಾದ ರೇವತಿ!" ಎಂದು ಸ್ತುತಿಸಿದನು.

ಎಲ್ಲರೂ ದಂಗು ಬಡೆದರು; ಬೆರಳು ಕಚ್ಚಿಕೊಂಡರು; ಭ್ರಮಿಷ್ಟರಂತೆ ಕುಳಿತರು; ಶಿಲೆಯಂತೆ ಸ್ತಂಭಿತರಾದರು; ಆನಂದೋನ್ಮಾದದಿಂದ ಮೈಮರೆತರು! "ಹಾ! ಇದೇನು?" ಎಂದು ಎಲ್ಲರೂ ಉದ್ಗಾರ ತೆಗೆದರು.

"ಇವಳು ನನ್ನ ಸೊಸೆಯೆ? ಶಾಂತಿವರ್ಮನ ಹೆಂಡತಿಯೆ? ನನ್ನ ಮನೆತನದ ನಿರ್ಮಲಕೀರ್ತಿಯು ಮೂರ್ತಿಮಂತ ದೇವತೆಯೆ? ಧೀರೋದಾತ್ತ ರೇವತಿಯೆ!"

ಪ್ರತಾಪವರ್ಮನು ಹೀಗೆ ಉದ್ಗಾರ ತೆಗೆದ ಕೂಡಲೆ ರೇವತಿಯು ತಲೆ ಬಾಗಿದಳು; ಮಂದಸ್ಮಿತೆಯಾದಳು; ಲಜ್ಜೆಗೊಂಡಳು; ಕಾತರಿಸಿದಳು. ಆಗ ಅವಳು ಭಯಕಂಪಿತ ಸ್ವರದಿಂದ ಪ್ರತಾಪವರ್ಮನನ್ನು ಕುರಿತು:—

"ಮಾನವಪತಿ, ಪತಿಯು ಕೇಳದೆ, ತನ್ನ ಆಜ್ಞೆಯನ್ನು ಕೊಂಡದೆ, ಸ್ತ್ರೀಧರ್ಮಕ್ಕನುಚಿತವಾದ ನಡತೆಯಲ್ಲಿ ತೊಡಗಿದ ನನ್ನ ಈ ಅಪರಾಧವನ್ನು ಕ್ಷಮಿಸಬೇಕೆಂದು ಕೈಗೊಡ್ಡಿ ಬೇಡಿಕೊಳ್ಳುವೆನು."

"ರೇವತೀದೇವಿ, ನೀನು ಅಪರಾಧಿಯಲ್ಲ; ಆದರ್ಶ ಆರ್ಯಾಂಗನೆಯಾದ ನೀನು ಜಗತ್ತಿಗೆ ಮಾರ್ಗದರ್ಶಕಳಾಗಿರುವೆ" ಎಂದು ಪ್ರತಾಪವರ್ಮನು ನುಡಿಯಲು, ಪುಲಿಕೇಶಿಯು ಗಂಭೀರ ಧ್ವನಿಯಿಂದ:

"ರೇವತೀದೇವಿ, ನೀನು ವಿಜಯಲಕ್ಷ್ಮಿಯು! ಉತ್ತರಾಪಥದ ಮಹಾವಿಜಯದ ಮೂರ್ತಿಮಂತ ದೇವತೆಯು! ಅಮ್ಮಾ, ನಿನ್ನ ಶೌರ್ಯ-ಸಾಹಸಗಳು ಅವರ್ಣನೀಯವಾಗಿರುವವು. ನೀನು ಜಗತ್ತನ್ನೇ ದಂಗು ಬಡಿಸಿಬಿಟ್ಟೆ. ಈ ವಿಷಯದಲ್ಲಿ ನೀನು ನಿರ್ಭಯಳಾಗು. ನೀನು ಅಪರಾಧಿಯೆಂದು ಯಾರೂ ತಿಳಿದಿರುವದಿಲ್ಲ. ವಿಲಕ್ಷಣ ಸಾಹಸವನ್ನು ವ್ಯಕ್ತಮಾಡಿ, ನೀನು ಕರ್ನಾಟಕ ಸಾಮ್ರಾಜ್ಯವನ್ನು ಋಣಿಯಾಗಿ ಮಾಡಿಕೊಂಡೆ. ನಿನ್ನ ಈ ಕಾರ್ಯಕ್ಕಾಗಿ ಈ ಕರ್ನಾಟಕ ಸಮ್ರಾಟನು ಅತ್ಯಂತ ಕೃತಜ್ಞನಾಗಿರುವನು." ಎಂದು ನುಡಿದು ಪುಲಿಕೇಶಿಯು ಮತ್ತೆ:—"ದೇವಿ, ನೀನು ಹರ್ಷವರ್ಧನನ ಖಡ್ಗವನ್ನು ಹೇಗೆ ತಂದೆ?"

"ಮಹಾರಾಜರೆ, ನಾನು ಇಲ್ಲಿಂದ ತಮ್ಮ ಅನುಜ್ಞೆಯನ್ನು ಪಡೆದು, ಬೈರಾಗಿಯ ವೇಷದಿಂದ ಹರ್ಷವರ್ಧನನ ಪಾಳೆಯವನ್ನು ಸೇರಿದೆನು. ಆಗ ಕಾವಲುಗಾರರು ನನ್ನನ್ನು ಹಿಡಿದು ಹರ್ಷವರ್ಧನನ ಸ್ವಾಧೀನಮಾಡಿದರು. ನಾನು ಹುಟ್ಟು ಜಟಾಧಾರಿಯಾದ ಬೈರಾಗಿಯೆಂದೂ, ರಾಮೇಶ್ವರದ ಯಾತ್ರೆಗಾಗಿ ಹೊರಟಿರಲು ದಾರಿ ತಪ್ಪಿ

ಇಲ್ಲಿಗೆ ಬಂದೆನೆಂದೂ ನಾನು ಅವನಿಗೆ ಹೇಳಿ, ಅವನ ರಾವುಟಿಯಲ್ಲಿಯೇ ವಿಶ್ರಮಿಸಿದೆನು. ನಾನು ವೈರಾಗಿಯೆಂದು ಅವನಿಗೆ ವಿಶ್ವಾಸವು ಹುಟ್ಟಿದ್ದರಿಂದ ಎಲ್ಲ ಕಾರ್ಯವೂ ಸುಲಭವಾಯಿತು. ಹರ್ಷವರ್ಧನನು ನಿದ್ರೆಹೋದನೆಂದು ನನ್ನ ಮನವರಿಕೆಯಾದ ಕೂಡಲೆ, ಅವನ ಖಡ್ಗವನ್ನು ತೆಗೆದುಕೊಂಡು, ಅವನ ಮುಕುಟಕ್ಕೆ ಒಂದು ಪತ್ರಿಕೆಯನ್ನು ಕಟ್ಟಿ ನಿಮ್ಮ ಬಳಿಗೆ ಬಂದೆನು. ನೀವು ನನ್ನನ್ನು ಸಹಾಯಕ ದಂಡಿನ ಮೇಲೆ ನಿಯಮಿಸಿದಿರಿ. ಯುದ್ಧವ್ಯೂಹವಾಗುತ್ತ ಬಂದಿದ್ದರೂ ವಿಜಯದ ನಿರ್ಣಯವಾಗದ್ದರಿಂದ ನನ್ನ ಸೇನೆಯನ್ನು ತೆಗೆದುಕೊಂಡು ಕೈಲಾದಮಟ್ಟಿಗೆ ಸಂಗ್ರಾಮ ಕಾರ್ಯವನ್ನು ಜರುಗಿಸಿದೆನು.''

“ಇಲ್ಲಿಗೆ ಬರುವಾಗ ನೀನು ನಿನ್ನ ಪತಿಯ ಆಜ್ಞೆಯನ್ನು ಪಡೆದಿದ್ದಿಲ್ಲವೇನು?”

“ಮಹಾರಾಜರೆ, ಈ ವಿಷಯದಲ್ಲಿ ಮಾತ್ರ ನಾನು ಸಂಪೂರ್ಣ ತಪ್ಪುಗಾರಳಿರುವೆನು. ಕುಬ್ಜ ವಿಷ್ಣುವರ್ಧನರು ರಾಜಧಾನಿಯ ರಕ್ಷಣೆಗಾಗಿ ಇರುವದರಿಂದ, ನೀವು ಸಮರಕ್ಕೆ ಹೊರಟು ಸ್ವರಾಜ್ಯಕಾರ್ಯದಲ್ಲಿ ಯಶವನ್ನು ಸಂಪಾದಿಸಬೇಕೆಂದು ನಾನು ಪತಿಗೆ ಬಹಳವಾಗಿ ಹೇಳಿದೆನು. ಕೇವಲ ವಿಲಾಸಲೋಲುಪರಾದ ಅವರಿಗೆ ಯುದ್ಧಕಾರ್ಯವೆಂದರೆ ಮೈಗೆ ಮುಳ್ಳು ಹಚ್ಚಿದಂತಾಗುತ್ತಿರುವದು. ಅವರು ಸಮರಕ್ಕೆ ಹೊರಡಲು ಸಮ್ಮತಿಸದ್ದರಿಂದ, ನಾನಾದರೂ ಕೈಲಾದಮಟ್ಟಿಗೆ ದೇಶಕಾರ್ಯವನ್ನು ಸಾಧಿಸಬೇಕೆಂದು, ಅವರಿಗೆ ಹೇಳದೆ ಇಲ್ಲಿಗೆಹೊರಟು ಬಂದೆನು. ಬರುವಾಗ ಒಂದು ಪತ್ರವನ್ನು ಬರೆದು ಅವರಿಗೆ ದೊರೆಯುವಂತೆ ಇಟ್ಟು ಬಂದಿರುವೆನು.”

“ಪತ್ರದಲ್ಲಿ ಸಂಗತಿಯನ್ನೇನು ಬರೆದಿದ್ದೆ?”

“ಉತ್ತರಾಪಥದ ವಿಜಯಯಾತ್ರೆಗಾಗಿ ತೆರಳಿದ ಪುಲಿಕೇಶಿ ಮಹಾರಾಜರ ಸೇನೆಯನ್ನು ಕೂಡುವದಕ್ಕಾಗಿ ಹೊರಟಿರುವೆನೆಂದೂ ನನ್ನ ಶೋಧದಲ್ಲಿ ತೊಡಗದೆ ನಿಶ್ಚಿಂತೆಯಿಂದಿರಬೇಕೆಂದೂ ಬರೆದಿ

ದ್ದೆನು; ಮನಸ್ಸಿದ್ದರೆ ನೀವಾದರೂ ಹೊರಟು ಬರಬೇಕೆಂದು ಅವರಿಗೆ ಪತ್ರದಲ್ಲಿ ತಿಳಿಸಿದ್ದೆನು.''

"ಅವನು ಹೇಡಿಯು, ಅಧೀರನು, ಅಳ್ಳೆದೆಯುವನು; ಇಂತಹನು ಸಮರಕ್ಕೆ ಬರುವನೆ!'' ಎಂದು ಪ್ರತಾಪವರ್ಮನು ನುಡಿದ ಕೂಡಲೆ, ಪುಲಿಕೇಶಿಯು:—

"ರೇವತಿದೇವಿ, ನೀನು ಆದರ್ಶ ಕ್ಷತ್ರಿಯ ರಮಣಿಯಾಗುವೆ. ನಿನ್ನ ಧನ್ಯವಾದವನ್ನು ಎಷ್ಟು ರೀತಿಯಿಂದ ಮಾಡಿದರೂ ಕಡಿಮೆಯಾಗಿದೆ.''

"ನರ್ಮದಾತೀರದ ದಕ್ಷಿಣದಲ್ಲಿದ್ದ ಎಲ್ಲ ಪ್ರದೇಶಗಳನ್ನು ಪುಲಿಕೇಶಿಯು ಸ್ವಾಧೀನಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ರಾಜಧಾನಿಯ ರಕ್ಷಣೆಗಾಗಿ ವಿಷ್ಣುವರ್ಧನನನ್ನೂ, ಶಾಂತಿವರ್ಮನನ್ನೂ ನಿಯಮಿಸಿ ಬಂದದ್ದರಿಂದ ಅವನಿಗೆ ಅತ್ತ ಕಡೆಯ ಚಿಂತೆಯು ಇಲ್ಲದಂತಾಗಿತ್ತು. ನರ್ಮದೆಯ ದಕ್ಷಿಣದಲ್ಲಿ ಹರ್ಷವರ್ಧನನ ಮಾಂಡಲಿಕರೊಬ್ಬರೂ ಇಲ್ಲದಂತೆ ಮಾಡಿ, ನರ್ಮದೆಯೇ ಕರ್ನಾಟಕದ ಉತ್ತರ ಮೇರೆಯೆಂಬುದನ್ನು ಬೇಗನೆ ಜಗತ್ತಿನ ನಿದರ್ಶನಕ್ಕೆ ತಂದು ಕೊಡಬೇಕೆಂದು ಅವನು ನಿಶ್ಚಯಿಸಿಕೊಂಡನು. ಅವನು ರೇವತಿದೇವಿಯ ಸಾಹಸದ ಕಾರ್ಯವನ್ನು, ಉತ್ತರಾಪಥದ ಮಹಾ ವಿಜಯದ ವಾರ್ತೆಯನ್ನೂ ಶಾಂತಿವರ್ಮ ವಿಷ್ಣುವರ್ಧನರಿಗೆ ತಿಳಿಸಬೇಕೆಂದು ವಿಚಾರಿಸಿ, ಅವರಿಗೆ ಪತ್ರ ಬರೆದನು. ರೇವತಿದೇವಿಯ ವಿಷಯವಾಗಿ ಯಾವ ಬಗೆಯಿಂದಲೂ ಸಂತಾಪಗೊಳ್ಳಬಾರದೆಂದು ಅವನು ಶಾಂತಿವರ್ಮನಿಗೆ ಬರೆದು ತಿಳಿಸಿದ್ದನು. ವಿಜಯಯಾತ್ರೆಗಾಗಿ ಅಲ್ಲಲ್ಲಿ ಸಂಚರಿಸಬೇಕಾದ್ದರಿಂದ, ಅವನು ರೇವತಿದೇವಿಯನ್ನು ಸಂರಕ್ಷಕಸೇನೆಯೊಡನೆ ವಾತಾಪಿಪುರಕ್ಕೆ ಅವಳ ಇಚ್ಛೆಯ ವಿರುದ್ಧವಾಗಿ ಆಗ್ರಹದಿಂದ ಕಳುಹಿಸಿದನು.

ಪುಲಿಕೇಶಿಯು ನಾಲ್ಕಾರು ದಿನಗಳ ವರೆಗೆ ವಿಶ್ರಾಂತಿ ಹೊಂದಿ ತನ್ನ ಪಡೆಯೊಂದಿಗೆ ವಿಜಯಯಾತ್ರೆಗಾಗಿ ಪಯಣ ಬೆಳೆಯಿಸಿದನು.

ಅವನು ನರ್ಮದಾ ನದಿಯ ದಂಡೆಗುಂಟ ಪೂರ್ವಾಭಿಮುಖವಾಗಿ ಹೊರಟು, ವಿಂಧ್ಯಪರ್ವತದ ಆಗ್ನೇಯಕ್ಕಿದ್ದ ಕೋಶಲರಾಜ್ಯವನ್ನು ಹೊಳಸಾಗ್ಗಿದನು. ಅಲ್ಲಿಯ ಅರಸನು ಹರ್ಷವರ್ಧನನ ಮಾಂಡಲಿಕನಿದ್ದರೂ ಇರಬಹುದು. ಮತ್ತು ಗಜದಂತಿದ್ದ ಕನ್ಯಕುಬ್ಜದ ಸಾರ್ವಭೌಮನನ್ನು ಪರಾಜಯಗೊಳಿಸಿದ ಪ್ರೌಢಪ್ರತಾಪಿಯನ್ನು ಎದುರಿಸುವಷ್ಟು ಎದೆಯು ಆ ಸಣ್ಣ ಅರಸನಿಗೆ ಎಲ್ಲಿಂದ ಬರಬೇಕು? ಅವನು ಪುಲಿಕೇಶಿಗೆ ಕಾಣಿಕೆಯನ್ನು ಕೊಟ್ಟು ಮಾಂಡಲಿಕನಾಗಲಿಕ್ಕೆ ಒಪ್ಪಿಕೊಂಡನು. ವೀರಶಿಖಾಮಣಿಯಾದ ಪುಲಿಕೇಶಿ ಸಾರ್ವಭೌಮನು ಕೋಶಲ ರಾಜನ ಆದರಾತಿಥ್ಯವನ್ನು ಹೊಂದಿ, ಆಗ್ನೇಯಾಭಿಮುಖವಾಗಿ ಕಲಿಂಗರಾಜ್ಯದ ಮೇಲೆ ದಂಡೆತ್ತಿ ಹೋದನು.

ಕಲಿಂಗವು ಬಹು ಪುರಾತನ ಕಾಲದಿಂದ ಹೆಸರುವಾಸಿಯಾದ ರಾಜ್ಯವು. ವೈತರಣಿ ನದಿಯು ಅದರ ಬಡಗಣ ಮೇರೆಯಾಗಿಯೂ, ಅಮರಕಂಟಕ ಪರ್ವತಾವಳಿಯು ಪಡುವಣ ಮೇರೆಯಾಗಿಯೂ, ಮಹೇಂದ್ರಗಿರಿಯು ತೆಂಕಣ ಮೇರೆಯಾಗಿಯೂ, ಮೂಡಗಡಲು ಪೂರ್ವಮೇರೆಯಾಗಿಯೂ ಇದ್ದವು. ಪುಲಿಕೇಶಿಯು ಕಲಿಂಗರಾಜ್ಯಕ್ಕೆ ಬರುವದಕ್ಕಿಂತ ಮೊದಲೇ ಅವನ ಕೀರ್ತಿಯು ಆ ನಾಡಿನಲ್ಲೆಲ್ಲ ಹಬ್ಬಿತ್ತು. ಆದ್ದರಿಂದ ಆ ಕ್ಷತ್ರಿಯ ಪುಲಿಕೇಶಿ ಸಾರ್ವಭೌಮನನ್ನು ಎದುರಿಸುವದು ವ್ಯರ್ಥವೆಂದು ಮನಗಂಡ ಕಲಿಂಗೇಶ್ವರನು ಅವನಿಗೆ ಶರಣು ಬಂದು, ಅಪ್ಪು-ಕಾಣಿಕೆಗಳನ್ನೊಪ್ಪಿಸಿ, ಅವನ ಸಾಮಂತನಾಗಲಿಕ್ಕೆ ಒಡಂಬಟ್ಟನು.

ಪುಲಿಕೇಶಿಯು ಅತ್ಯಂತ ದೃಢನಿಶ್ಚಯದವನಾಗಿದ್ದನು. ವಿಷಯೋಪಭೋಗಗಳಲ್ಲಿಯೂ, ಆಟ-ನೋಟಗಳಲ್ಲಿಯೂ ಅವನ ಆಸಕ್ತಿಯು ಹೆಚ್ಚಾಗಿದ್ದಿಲ್ಲ. ರಣಾಂಗಣದಲ್ಲಿ ಶೌರ್ಯದಿಂದ ಹೋರಾಡಿ, ಕನ್ನಡಿಗರ ಕೀರ್ತಿಯನ್ನು ಆಚಂದ್ರಾರ್ಕವಾಗಿ ಮಾಡಬೇಕೆಂದು ಅವನು ಹೆಬ್ಬಯಕೆಯುಳ್ಳವನಾಗಿದ್ದನು. ತನ್ನ ನಿಶ್ಚಯದಂತೆ ಬಹುತರವಾಗಿ ನರ್ಮದೆಯ ದಕ್ಷಿಣ ಪ್ರದೇಶವೆಲ್ಲ ಕೈವಶವಾದೊಡನೆಯು

ಅವನು ವಿಜಯಯಾತ್ರೆಯನ್ನು ಮುಗಿಸಿಕೊಂಡು ಕಡು ವೈಭವದಿಂದ ರಾಜಧಾನಿಗೆ ಹೊರಟನು.

ವಿಜಯಯಾತ್ರೆಯನ್ನು ಮುಗಿಸಿಕೊಂಡು ಬಂದ ಪುಲಿಕೇಶಿಯನ್ನು ಪೌರವಾಸಿಗಳು ಬಹು ಸಂಭ್ರಮದಿಂದ ಎದುರ್ಗೊಂಡು ರಾಜಧಾನಿಗೆ ಕರೆತಂದರು. ಆಗ ರಾಜಧಾನಿಯಲ್ಲಿ ಸಡಗರದ ಸಮಾರಂಭಗಳು ನಡೆದವು.

ಪುಲಿಕೇಶಿಯು ರಾಜಧಾನಿಯಲ್ಲಿ ವರ್ಷಾರು ತಿಂಗಳು ಇರುವಷ್ಟರಲ್ಲಿ ಕಲಿಂಗದೇಶದ ತೆಂಕಣ ನಾಡನ್ನು ವಶಮಾಡಿಕೊಳ್ಳಬೇಕೆಂದು ಯೋಚಿಸಿದನು. ಆ ಪ್ರದೇಶವು ಕಂಚಿಯ ಪಲ್ಲವರ ಮಾಂಡಲಿಕತ್ವದಲ್ಲಿತ್ತು. ಈ ನಾಡಿನೊಳಗೆ ಪಿಷ್ಟಪುರವೆಂಬ ಭದ್ರವಾದ ಕೋಟೆಯಿತ್ತು. ಆ ಕೋಟೆಯು ಕೈವಶವಾದರೆ ಆ ನಾಡೇ ತನ್ನ ಕೈಯಲ್ಲಿ ಬಂದಂತಾಗುವದೆಂದು ತಿಳಿದು, ಈ ಕರ್ನಾಟಕ ಸಾರ್ವಭೌಮನು ಹೇರಳವಾದ ಸೇನೆಯೊಡನೆ ಪಿಷ್ಟಪುರವನ್ನು ಮುತ್ತುವದಕ್ಕಾಗಿ ಹೊರಟನು. ಈ ಕೋಟೆಯು ಬಹಳವಾಗಿ ಭದ್ರವಾದದ್ದಿತ್ತು. ಆ ಕೋಟೆಯ ಒಡೆಯನು ಹಾಗು ದಂಡಾಳುಗಳು, ಶೂರರೂ ಸ್ವಾಮಿನಿಷ್ಠರೂ ಆಗಿದ್ದರು. ಆಗ ತೋಪು-ಸಿಡಿಮದ್ದುಗಳ ಸಾಧನವಿಲ್ಲದ್ದರಿಂದ, ಆ ಕೋಟೆಯು ಪುಲಿಕೇಶಿಗೆ ವಶವಾಗಬೇಕಾದರೆ ಆರೇಳು ತಿಂಗಳುಗಳು ಹಿಡಿದವು. ಅದು ಕೈವಶವಾದ ಬಳಿಕ ಗೋದಾವರಿಯಿಂದ ಪೆನ್ನಾರ ನದಿಯ ವರೆಗೆ ಸಮುದ್ರದ ದಂಡೆಗುಂಟ ಹಬ್ಬಿದ ಎಲ್ಲ ಪ್ರದೇಶವನ್ನು ಈ ಶಕ್ತಿಶಾಲಿಯು ಗೆದ್ದುಕೊಂಡನು. ತಾನು ಹೊಸದಾಗಿ ಗೆದ್ದ ಪ್ರಾಂತಗಳ ಮೇಲೆ ತಿನ್ನ ತಮ್ಮನಾದ ವಿಷ್ಣುವರ್ಧನನನ್ನು ನಿಯಮಿಸಬೇಕೆಂದು ಅವನು ಸಂಕಲ್ಪಮಾಡಿಕೊಂಡು ಮರಳಿ ರಾಜಧಾನಿಗೆ ಬಂದನು.

ಪುಲಿಕೇಶಿಯು ರಾಜಧಾನಿಗೆ ಬಂದ ಬಳಿಕ ತಾನು ಗೆಲಿದ ಸೀಮೆಗಳ ವ್ಯವಸ್ಥೆಯನ್ನು ಮಾಡುವದರಲ್ಲಿ ತೊಡಗಿದನು. ಇವನಿಗೆ ವಿಷ್ಣುವರ್ಧನ-ಜಯಸಿಂಹರೆಂಬ ಸಹೋದರರೂ, ಆದಿತ್ಯವರ್ಮ,

ಚಂದ್ರಾದಿತ್ಯ, ವಿಕ್ರಮಾದಿತ್ಯ, ಜಯಸಿಂಹವರ್ಮ ಎಂಬ ನಾಲ್ವರು ಮಕ್ಕಳೂ ಇದ್ದರಷ್ಟೇ; ಅವರೆಲ್ಲರನ್ನೂ ಹಿಂದೊಂದು ಪ್ರಾಂತಗಳಿಗೆ ಅಧಿಕಾರಿಗಳನ್ನಾಗಿ ನಿಯಮಿಸಬೇಕೆಂದು ಯೋಚಿಸಿಕೊಂಡಿದ್ದನು. ಅದರಂತೆ ಅವನು ತನ್ನ ಬಂಧುವಾದ ವಿಷ್ಣುವರ್ಧನನನ್ನು ವೆಂಗಿಯ ರಾಜ್ಯಕ್ಕೂ, ಇನ್ನೊಬ್ಬ ಬಂಧುವನ್ನು ಲಾಟ ರಾಜ್ಯದ ಮೇಲೆಯೂ ನಿಯಮಿಸಿದನು. ಹಿರಿಯಮಗನಾದ ಆದಿತ್ಯವರ್ಮನು ಚಿತ್ರದುರ್ಗ, ಬಳ್ಳಾರಿ, ಕರ್ನೂಲು ನಾಡುಗಳನ್ನೊಳಗೊಂಡ ನೊಳಂಬವಾಡಿ ಪ್ರಾಂತಕ್ಕೆ ಒಡೆಯನಾದನು. ಎರಡನೆಯವನಾದ ಚಂದ್ರಾದಿತ್ಯನು ರೇವತಿದ್ವೀಪದಲ್ಲಿದ್ದು ಉತ್ತರ ಕೊಂಕಣವನ್ನು ಆಳತೊಡಗಿದನು. ನಾಲ್ಕನೆಯವನಾದ ಜಯಸಿಂಹವರ್ಮನು ಗುಜರಾಥ ಪ್ರಾಂತಕ್ಕೆ ಒಡೆಯನಾದನು. ಮೂರನೆಯವನಾದ ವಿಕ್ರಮಾದಿತ್ಯನು ಅತ್ಯಂತ ವಿಕ್ರಮಶಾಲಿಯೂ ದೀರ್ಘಸಾಹಸಿಯೂ ಇದ್ದುದರಿಂದ, ಅವನೇ ರಾಜ್ಯಭಾರವನ್ನು ಹೊರಲಿಕ್ಕೆ ತಕ್ಕವನೆಂದು ತಿಳಿದು, ಪುಲಿಕೇಶಿಯು ಅವನನ್ನು ರಾಜಧಾನಿಯಲ್ಲಿಯೇ ಇರಿಸಿಕೊಂಡಿದ್ದನು. ಅವನು ರಾಜಕಾರ್ಯದಲ್ಲಿ ತಂದೆಗೆ ನೆರವಾಗತೊಡಗಿದನು.

ಪುಲಿಕೇಶಿಯು ಅಖಂಡವಾದ ದಿಗ್ವಿಜಯಯಾತ್ರೆಯಿಂದ ದಕ್ಷಿಣಾಪಥವೆಲ್ಲವೂ ಅವನ ಸ್ವಾಧೀನವಾಯಿತು. ಈ ಕರ್ನಾಟಕ ಸಮ್ರಾಟನು ದಕ್ಷಿಣಾಪಥೇಶ್ವರನೆಂಬ ಬಿರುದನ್ನು ಧರಿಸಿದನು. ಅವನಿಗೆ ಸತ್ಯಾಶ್ರಯ, ಶ್ರೀ ವಲ್ಲಭ, ಪರಮಭಟ್ಟಾರಕ, ಪರಮಮಾಹೇಶ್ವರ, ಮಹಾರಾಜಾಧಿರಾಜ ಎಂಬ ಗೌರವದ ಬಿರುದುಗಳು ಇದ್ದುವು.

ಕನ್ಯಕುಬ್ಜದ ಹರ್ಷವರ್ಧನನನ್ನು ಸೋಲಿಸಿದ್ದರಿಂದಲೂ, ದಕ್ಷಿಣದಲ್ಲಿ ವ್ಯಾಹತಿಯಿಲ್ಲದೆ ವಿಜಯಯಾತ್ರೆಯನ್ನು ಮಾಡಿದ್ದರಿಂದಲೂ ಈ ಕರ್ನಾಟಕ ಸಾರ್ವಭೌಮನ ವಿಜಯದುಂದುಭಿಯು ಜಗತ್ತಿನಲ್ಲೆಲ್ಲ ಕೇಳತೊಡಗಿತು!



## ಕನ್ನಡಿಗರ ಯಶೋದುಂದುಭಿ!

ಶಾಂತಿವರ್ಮನು ಕೇವಲ ಸುಖೋಪಭೋಗಗಳಲ್ಲಿಯೂ, ವಿಲಾಸದಲ್ಲಿಯೂ ಕಾಲಕಳೆಯುತ್ತ ತೊಡಗಿದ್ದನು. ಅವನ ಈ ವರ್ತನವು ಪ್ರತಾಪವರ್ಮನಿಗೆ ಸರಿಯಾಗಿ ಕಾಣಲಿಲ್ಲ. ಅವನ ನಡತೆಯಲ್ಲಿ ಸುಧಾರಣೆಯಾಗಬೇಕೆಂದು ಮಗನಿಗೆ ಪ್ರತಾಪವರ್ಮನು ಎಷ್ಟೋ ಸಾರೆ ಉಪದೇಶ ಮಾಡಿದ್ದನು. ಆದರೂ ಅವನ ಪ್ರಯತ್ನಕ್ಕೆ ಯಶವು ಲಭಿಸಲಿಲ್ಲ. ಶಾಂತಿವರ್ಮನಿಗೆ ಚನ್ನಾಗಿ ಬೋಧಿಸಿ ಅವನನ್ನು ಕರ್ತವ್ಯನಿಷ್ಠನನ್ನಾಗಿ ಮಾಡಬೇಕೆಂದು ಪ್ರತಾಪವರ್ಮನು ಪುಲಿಕೇಶಿ ಮಹಾರಾಜನಿಗೆ ತಿಳಿಸಿದ್ದನು.

ದಕ್ಷಿಣಾಪಥವು ಪುಲಿಕೇಶಿಗೆ ಸ್ವಾಧೀನವಾಗಿ ಎಲ್ಲ ಕಡೆಯಲ್ಲಿ ಶಾಂತಿಯು ನೆಲೆಗೊಂಡಿತ್ತು. ಅವನು ನಾಲ್ಕಾರು ತಿಂಗಳುಗಳಿಂದ ಎಲ್ಲಿಯೂ ಹೊರಡದೆ ರಾಜಧಾನಿಯಲ್ಲಿದ್ದನು. ತಮ್ಮಂದಿರನ್ನೂ ಮಕ್ಕಳನ್ನೂ ಬೇರೆ ಬೇರೆ ಪ್ರಾಂತಗಳ ಮಂಡಲೇಶ್ವರರನ್ನು ಮಾಡಿ ಕಳುಹಿಸಿದ್ದರಿಂದ, ಅವನಿಗೆ ಆ ಪ್ರಾಂತಗಳ ಆಡಳಿತದ ಚಿಂತೆಯು ತಪ್ಪಿತು. ತಮ್ಮಂದಿರು ಮಕ್ಕಳು ಪರಾಕ್ರಮಿಗಳಿದ್ದುದರಿಂದ ಆ ಹೊಸಪ್ರಾಂತಗಳ ವ್ಯವಸ್ಥೆಯನ್ನು ನೋಡುವರೆಂದು ಅವನು ತಿಳಿದು ನಿಶ್ಚಿಂತನಾಗಿದ್ದನು. ತನ್ನ ಆಳಿಕೆಯು ಇಷ್ಟು ಕಾಲದವರೆಗೆ ಕೇವಲ ದಂಡಯಾತ್ರೆಯಲ್ಲಿಯೆ ತೊಡಗಿದ್ದರಿಂದ, ರಾಜ್ಯದ ಹಾಗು ರಾಜಧಾನಿಯ ಕೆಲವು ಸಣ್ಣ ಸಣ್ಣ ಕೆಲಸಗಳು ನಿಂತಿದ್ದವು. ಅಲ್ಲಲ್ಲಿಯ ದೇವಸ್ಥಾನಗಳ ವ್ಯವಸ್ಥೆ, ಕೈಗಾರಿಕೆಯವರಿಗೆ ಉತ್ತೇಜನ ಕೊಡುವದು, ವ್ಯಾಪಾರಾಭಿವೃದ್ಧಿಗೆ ತಕ್ಕ ಸೌಕರ್ಯಗಳನ್ನೊದಗಿಸಿ ಕೊಡುವದು, ಯುದ್ಧದಲ್ಲಿ ಪರಾಕ್ರಮ ತೋರಿಸಿದವರಿಗೆ ತಕ್ಕ ಸಂಭಾವನೆ ಮಾಡುವದು, ಕಲಾ-ಕೌಶಲ್ಯಗಳ ಬೆಳವಣಿಗೆ ಮಾಡುವದು ಮೊದಲಾದ ರಾಜ್ಯದ ಅಂತರ್ಗತ ವ್ಯವಸ್ಥೆಯನ್ನು ಮಾಡಬೇಕೆಂದು ನಿಶ್ಚಯಿಸಿ ಕೊಂಡು ಅವನು ನಾಲ್ಕಾರು ತಿಂಗಳುಗಳಿಂದ ರಾಜಧಾನಿಯಲ್ಲಿಯೇ ಇದ್ದನು.

ವಿಲಾಸಕ್ಕೆ ಮೆಚ್ಚಿ ಆಲಸಿಯಾದ ಶಾಂತಿವರ್ಮನಿಗೆ ಬೋಧಿಸಿ ಅವನನ್ನು ಕರ್ತವ್ಯದಲ್ಲಿ ತೊಡಗಿಸಬೇಕೆಂದು ಪುಲಿಕೇಶಿಯು ಅವನನ್ನು ಅರಮನೆಗೆ ಕರೆಯಿಸಿದ್ದನು. ವಿಜಯಾಂಬಿಕಾದೇವಿಯೂ ರೇವತಿಯೂ ಆಗ ಅಲ್ಲಿಯೇ ಇದ್ದರು. 'ಋಣಂ ಕೃತ್ವಾ ಘೃತಂಪಿಬೇತ್' ಎಂಬ ತತ್ವದ ಶಾಂತಿವರ್ಮನ ಮೋರೆಯ ಮೇಲಿನ ನೀರಿಳಿಸಿ ಬಿಡಬೇಕೆಂದು ಎಲ್ಲರೂ ನಿಶ್ಚಯಿಸಿದ್ದರು. ಆಗ ಪುಲಿಕೇಶಿಯು ಶಾಂತಿವರ್ಮನನ್ನು ಕುರಿತು ಸೌಮ್ಯವಾಣಿಯಿಂದ:- "ಶಾಂತಿವರ್ಮರೆ, ಸ್ವದೇಶಕ್ಕಾಗಿ ಹೋಗಿ ಮುಪ್ಪು ಹೊಂದಿದ ಪ್ರತಾಪವರ್ಮರನ್ನು ಸೇನಾನಿವೃತ್ತರನ್ನು ಮಾಡಬೇಕೆಂದು ಯೋಚಿಸಿರುವೆನು. ನೀವು ಅವರ ಸ್ಥಳವನ್ನಲಂಕರಿಸಿ, ತಂದೆಗಿಂತಲೂ ಹೆಚ್ಚಿನ ವಿಕ್ರಮಶಾಲಿಗಳೆಂದು ಜನರಿಂದ ಹೊಗಳಿಸಿಕೊಳ್ಳುವಂತೆ ಕರ್ತವ್ಯತತ್ಪರರಾಗತಕ್ಕದ್ದು. ನಿಮಗೆ ಬೇಗನೆ ಮುಖ್ಯಸೇನಾಪತಿಯು ವಸ್ತ್ರದಾನ ಮಾಡಬೇಕೆಂದು ನಿಶ್ಚಯಿಸಿರುವೆನು. ಈ ಮಾತಿಗೆ ನೀವು ಒಳ್ಳೆಯ ಆನಂದದಿಂದ ಒಪ್ಪುವಿರೆಂದು ಆಶಿಸುವೆನು."

ಪುಲಿಕೇಶಿಯ ಈ ಮಾತುಗಳನ್ನು ಕೇಳಿ ಶಾಂತಿವರ್ಮನು ಗೊಂದಲದಲ್ಲಿ ಬಿದ್ದನು. ಅವನಿಗೆ ಏನು ಉತ್ತರ ಕೊಡಬೇಕೆಂಬದು ತೋಚದ್ದರಿಂದ, ಶಾಂತಿವರ್ಮನು ತಟಸ್ಥನಾಗಿ ಕುಳಿತನು. ಅವನ ಮನಸ್ಸಿನ ಒಲವು ಪುಲಿಕೇಶಿಗೆ ತಿಳಿಯದಿರಲಿಲ್ಲ.

"ಶಾಂತಿವರ್ಮರೆ, ಸೇನಾಪತಿಪದವನ್ನು ಹೊಂದಬೇಕೆಂದು ಎಷ್ಟೋ ಜನರು ತಪಶ್ಚರ್ಯ ಮಾಡುತ್ತಲಿರುವರು. ಆನುವಂಶಿಕವಾಗಿ ನಡೆದು ಬಂದ ನಿಮ್ಮ ಮನೆತನಕ್ಕೇ ನಾನು ಈ ಅಧಿಕಾರವು ಉಳಿಯಬೇಕೆಂಬ ಇಚ್ಛೆಯುಳ್ಳವನಾಗಿರುವೆನು. ನಿಮ್ಮ ಒಪ್ಪಿಗೆಯಿರದಿದ್ದರೆ ಮಾತ್ರ ಅನಿವಾರ್ಯಕಕ್ಕಾಗಿ ಎರಡನೆಯವರನ್ನು ನಿಯಮಿಸಿಕೊಳ್ಳಬೇಕಾಗುವದು."

ಪುಲಿಕೇಶಿಯು ಹೀಗೆ ನುಡಿದ ಕೂಡಲೆ, ಶಾಂತಿವರ್ಮನು ಮಾತನಾಡುವದಕ್ಕೆ ಧೈರ್ಯಹೊಂದಿದನು.

"ಮಹಾರಾಜರೆ, ತಮ್ಮ ಅನುಗ್ರಹದಿಂದ ನಮ್ಮಲ್ಲಿ ಹೇರಳ ವಾದ ಸಂಪತ್ತಿರುವದು. ಕೇವಲ ಸೇವಾವೃತ್ತಿಯಿಂದಲೇ ಉಪಜೀವನ ಸಾಗಿಸಬೇಕೆನ್ನುವ ಸ್ಥಿತಿಯು ಇಲ್ಲದಿರುವಾಗ, ಇಲ್ಲದ ಹವ್ಯಾಸಕ್ಕೆ ಹೋಗುವ ಕಾರಣವೇನು?"

"ನಿಮ್ಮ ವಿಚಾರಗಳು ಉದಾತ್ತವಿರುವವು! ಶಾಂತಿವರ್ಮರೆ, ಕೇವಲ ಉದರಪೋಷಣೆಗಾಗಿಯೇ ಜಗತ್ತಿನ ಎಲ್ಲ ವ್ಯವಹಾರಗಳು ನಡೆದಿರುವವೇನು? ನನಲ್ಲಿ ದಂಡ ಹೇರಳವಾದ ಐಶ್ವರ್ಯವಿರುವದೆಂದು ರಾಜ್ಯದಾಧಿಕತವನ್ನು ಬಿಟ್ಟು ನಾನು ಸ್ವಸ್ಥವಾಗಿ ಕುಳಿತು ಕೊಳ್ಳಬೇಕೆಂದು ನೀವು ಅನ್ನುವಿರೇನು?"

'ಮಹಾರಾಜರೆ, ನನ್ನ ಅಭಿಪ್ರಾಯವಂತೂ ಹೀಗೆಯೇ ಇದೆ'

"ಶಾಂತಿವರ್ಮರೆ, ನೀವು ಪ್ರಣಯಪಂಕದಲ್ಲಿ ಸಿಲುಕಿ ಕರ್ತವ್ಯಮೂಢರಾಗಿರುವಿರಿ. ಅತ್ಯಂತ ವಿಕ್ರಮಶಾಲಿಗಳಾದ ಪ್ರತಾಪವರ್ಮರ ಉದರದಲ್ಲಿ ನೀವು ಜನಿಸಿದ್ದೆಂದರೆ, ಸಿಂಹದ ಹೊಟ್ಟೆಯಿಂದ ಜಂಬೂಕವು ಜನಿಸಿದಂತಾಗಿರುವದು ಕನ್ನಡ ನಾಡಿನಲ್ಲಿ ಸ್ತ್ರೀಯರು ಸಹ ರಾಷ್ಟ್ರಕಾರ್ಯದಲ್ಲಿ ಭಾಗ ತೆಗೆದುಕೊಂಡು ತಮ್ಮ ಕೀರ್ತಿಯನ್ನು ಅಜರಾಮರ ಮಾಡುತ್ತಿರುವಾಗ, ಪುರುಷರೆಂದೆನಿಸಿಕೊಳ್ಳುವ ನೀವು ಈ ಬಗೆಯ ಅಪೌರುಷೇಯ ಮಾತುಗಳನ್ನಾಡುವದನ್ನು ಕೇಳಿ ನನಗೆ ಕಡು ಖೇದವೆನಿಸತೊಡಗಿದೆ. ನರ್ಮದೆಯ ತುಮುಲ ಸಂಗ್ರಾಮದಲ್ಲಿ ನಿಮ್ಮ ಪತ್ನಿಯಾದ ರೇವತಿದೇವಿಯು ತೋರಿಸಿದ ಪರಾಕ್ರಮವು ಜಗತ್ಪ್ರಸಿದ್ಧವಿರುವದು. ನೀವು ಅವಳ ಅನುಕರಣ ಮಾಡತಕ್ಕದ್ದು."

"ಸ್ತ್ರೀಯರು ಗಂಡರಾಮೆಯರಾಗಿ ಮೆರೆಯುತ್ತ, ಪುರುಷರ ಮರ್ಯಾದೆಗೆ ಕಲಂಕ ಹಚ್ಚತೊಡಗಿರುವರು ಕಲಿಕಾಲ ಮಹಿಮೆಯೇ ಹಾಗಿರುವದು ಕಾಲಾಯ ತಸ್ಮೈ ನಮಃ।"

"ಪುರುಷರಾದವರು ಕೈಯಲ್ಲಿ ಬಳೆಯಿಟ್ಟುಕೊಂಡು ಕುಳಿತ ಮೇಲೆ ಸ್ತ್ರೀಯರು ಮುಂದೆ ಬಂದು, ರಾಷ್ಟ್ರಕಾರ್ಯತತ್ಪರರಾಗು

ವದು ಸ್ವಾಭಾವಿಕವು. ಕೇವಲ ಸುಖೋಪಭೋಗವೇ ಮುಖ್ಯ ಧ್ಯೇಯುವೆಂದು ಎಷ್ಟೋ ಪುರುಷರು ತಿಳಿದುಕೊಂಡಿರುವರು. ಕಲಿ ಕಾಲಪ್ರಭಾವವೇ ಹಾಗಿರುವದು. ಕಾಲಾಯ ತಸ್ಮೈ ನಮಃ!"

ಶಾಂತಿವರ್ಮನ ಮಾತಿಗೆ ವಿಜಯಾಂಬಿಕಾ ಮಹಾರಾಜ್ಞಿಯು ನಗುತ್ತ-ನಗುತ್ತ ಹೀಗೆ ನುಡಿದ ಕೂಡಲೆ, ರೇವತಿದೇವಿಯು ಮುಗುಳುನಗೆಯಿಂದ:— "ಪುರುಷರು ತಾವು ಕರ್ತವ್ಯಭ್ರಷ್ಟರಾದದ್ದಲ್ಲದೆ, ಕೈಲಾದಷ್ಟು ದೇಶಸೇವೆಯನ್ನು ಮಾಡುವ ಸ್ತ್ರೀಯರಿಗೆ ಸಹ ಅಡ್ಡಿ ಮಾಡತೊಡಗಿರುವದನ್ನು ನೋಡಿದರೆ, ಕಲಿ ಮಹಿಮೆಯು ಚನ್ನಾಗಿ ವ್ಯಕ್ತವಾಗುವದು. ಕಾಲಾಯ ತಸ್ಮೈ ನಮಃ!"

ಶಾಂತಿವರ್ಮನು ಈ ಮರ್ಮಭೇದಕ ಮಾತುಗಳಿಂದ ತೀರ ಹಣ್ಣಾದನು. ಎಲ್ಲ ಜನರು ತನ್ನ ಟೀಕೆಯನ್ನು ಮಾಡುವದನ್ನು ಕೇಳಿ, ತಾನು ತಪ್ಪು ಹಾದಿಯನ್ನು ಹಿಡಿದಿರಬಹುದೇನೆಂದು ವಿಚಾರದಲ್ಲಿ ಮುಳುಗಿದನು. ಪುಲಿಕೇಶಿ-ವಿಜಯಾಂಬಿಕಾದೇವಿ-ರೇವತಿಯರ ಮಾತಿಗೆ ಸಮರ್ಪಕವಾಗಿ ಉತ್ತರವನ್ನೇನು ಕೊಡಬೇಕೆಂಬದು ಅವನಿಗೆ ಹೊಳೆಯದಾಯಿತು. ಆಗ ಪುಲಿಕೇಶಿಯು: —"ಶಾಂತಿವರ್ಮರೆ, ಕ್ಷಾತ್ರಧರ್ಮೋಚಿತವಾದ ಕರ್ತವ್ಯದಲ್ಲಿ ತೊಡಗಿ ದೇಶಕಾರ್ಯವನ್ನು ಮಾಡುತ್ತ, ದೇಹವನ್ನು ಸವಿಸಿದರೆ ಸದ್ಗತಿಯು ಲಭಿಸುವದು. ನಾಯಿ-ನರಿಗಳಂತೆ ಹೊಟ್ಟೆ ಹೊರೆದು ದೇಹವನ್ನು ತ್ಯಜಿಸುವ ಮನುಷ್ಯರಿಗೆ ಇಹ-ಪರಗಳಲ್ಲೊಂದೂ ಸೌಖ್ಯವು ಲಭಿಸಲಾರದು."

"ನೀವು ಯಾವುದಕ್ಕೆ ಸೌಖ್ಯವೆನ್ನುವಿರೋ, ಅವರ ಸೌಖ್ಯವು ಯಾವ ಬಗೆಯದಿರುವದೋ?" ಎಂದು ವಿಜಯಾಂಬಿಕಾ ಮಹಾರಾಣಿಯು ನಗುತ್ತ ನುಡಿದು:— "ರೇವತಿಯೇ ಶಾಂತಿವರ್ಮರ ಸುಖಸರ್ವಸ್ವವಾಗಿರುವಾಗ ಅವರಿಗೆ ಅನ್ಯಸುಖಗಳ ಅವಶ್ಯಕತೆಯೇ ಇಲ್ಲ. ಯಾಕೆ, ರೇವತಿ, ನನ್ನ ಮಾತು ನಿಜವಿರುವದಲ್ಲವೆ?"

"ನನಗೆ ಈ ವಿಷಯವು ತಿಳಿಯದು." ಎಂದು ರೇವತಿಯು ಮಂದಹಾಸ ಮುಖವುಳ್ಳವಳಾಗಿ ನುಡಿದು, ಲಜ್ಜೆಯಿಂದ ತಲೆಬಾಗಿ

ಸಿದಳು. ಆಗ ಪುಲಿಕೇಶಿಯು ಶಾಂತಿವರ್ಮನನ್ನು ಕುರಿತು:—“ಶಾಂತಿವರ್ಮರೆ, ಇಂದು ಓಲಗದ ವೇಳೆಯಾಯಿತು. ಈ ವಿಷಯವಾಗಿ ಮತ್ತೊಮ್ಮೆ ಮಾತಾಡೋಣವಂತೆ. ನಿಮಗೆ ನಾನು ಬೀಜ ಮಾತು ಹೇಳುವದೇನಂದರೆ, ಕನ್ನಡಿಗರ ಯಶೋದುಂದುಭಿಯು ಜಗತ್ತಿನಲ್ಲೆಲ್ಲ ಮೊಳಗಬೇಕಾದರೆ ನಿಮ್ಮಂತಹ ಕ್ಷಾತ್ರತೇಜದ ಜನರು ಕೇವಲ ವಿಷಯ ವ್ಯಾಮೋಹದಲ್ಲಿ ಭ್ರಮಿಷ್ಠರಾಗದೆ, ಕರ್ತವ್ಯ ಪ್ರಭಾವವನ್ನು ತೋರಿಸಬೇಕಾಗುವದೆಂಬದನ್ನು ನಿಮಗೆ ಹೇಳದಿರಲಾರೆನು” ಎಂದು ನುಡಿದು, ಪುಲಿಕೇಶಿಯು ಓಲಗಕ್ಕೆ ತೆರಳಿದನು. ಶಾಂತಿವರ್ಮನು ರಾಜಮಂದಿರದಲ್ಲಿ ಕುಳಿತುಕೊಳ್ಳಲಾರದೆ, ಅಲ್ಲಿಂದ ತನ್ನ ನಿವಾಸಕ್ಕೆ ತೆರಳಿದನು.

ವಾತಾಪಿಪುರದ ಓಲಗದಲ್ಲಿ ಎಲ್ಲ ಮಂತ್ರಿ-ಸೇನಾಪತಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಮಹಾರಾಜನು ಇನ್ನೂ ಬಾರದ್ದರಿಂದ ಎಲ್ಲರೂ ಅವನ ಮಾರ್ಗಪ್ರತೀಕ್ಷೆ ಮಾಡತೊಡಗಿದ್ದರು. ಓಲಗವು ಬಹಳೇ ಸ್ತಬ್ಧವಾಗಿತ್ತು. ಅಷ್ಟರಲ್ಲಿ ವಂದಿಗಳು: “ಶ್ರೀ ಪೃಥ್ವಿವಲ್ಲಭ, ಪರಮಭಟ್ಟಾರಕ, ರಾಜಪರಮೇಶ್ವರ, ಮಹಾರಾಜಾಧಿರಾಜ, ಸತ್ಯಾಶ್ರಯ ಪುಲಿಕೇಶಿ ಮಹಾರಾಜರಿಗೆ ಜಯವಾಗಲಿ!” ಎಂದು ವಿಜಯಘೋಷಣೆ ಮಾಡಿದರು. ಕೂಡಲೆ ಸಮ್ರಾಟನ ಆಗಮನವಾಯಿತೆಂದು ಓಲಗದವರು ತಮ್ಮ ಸ್ಥಳದಿಂದೆದ್ದು ಕೈ ಕಟ್ಟಿಕೊಂಡು ನಿಂತರು. ಅಷ್ಟರಲ್ಲಿ ಸಾರ್ವಭೌಮನು ಓಲಗವನ್ನು ಪ್ರವೇಶಿಸಿ ಸಿಂಹಾಸನದಲ್ಲಿ ಮಂಡಿಸಿದನು. ಅನಂತರದಲ್ಲಿ ಎಲ್ಲ ಸಭಿಕರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ದೇಶದೊಳಗಿನ ಕಲಾಕೌಶಲ್ಯದ ಅಭಿವೃದ್ಧಿಗಾಗಿ, ಕಲಾಕೋವಿದರಿಗೆ ಯಾವ ಯಾವ ಸೌಕರ್ಯಗಳನ್ನೊದಗಿಸಿ ಕೊಡತಕ್ಕದ್ದು, ರಾಜ್ಯದ ವ್ಯಾಪಾರಾಭಿವೃದ್ಧಿಗಾಗಿ ವಣಿಗ್ಜನರಿಗೆ ಯಾವ ಬಗೆಯ ಅನುಕೂಲತೆ ಮಾಡಿಕೊಡತಕ್ಕದ್ದು ಮೊದಲಾದ ವಿಷಯವಾಗಿ ಅಂದಿನ ಸಭೆಯಲ್ಲಿ ವಿಚಾರಣೆಯಾಗತಕ್ಕದ್ದಿತ್ತು. ಇನ್ನು ವಿಷಯವು ಪ್ರಾರಂಭವಾಗುವದಿತ್ತು.

ಅಷ್ಟರಲ್ಲಿ ಪ್ರತಿಹಾರಿಯು ಸಾರ್ವಭೌಮನಿಗೆ ಮೂರು ಮೂರು ಸಾರೆ ನಮಿಸಿ:—

"ಮಹಾರಾಜರೆ, ಇರಾಣದೇಶದಿಂದ ಪ್ರತಿನಿಧಿಗಳು ಬಂದಿರುವರು. ಅವರು ಒಡೆಯರ ದರ್ಶನಕ್ಕಾಗಿ ಆತುರಗೊಂಡಿರುವರು."

ಕೂಡಲೆ ಪುಲಿಕೇಶಿಯು ಆ ಪ್ರತಿನಿಧಿಯನ್ನು ಒಳಗೆ ಬಿಡುವದಕ್ಕಾಗಿ ದ್ವಾರರಕ್ಷಕನಿಗೆ ತನ್ನಾಜ್ಞೆಯನ್ನು ತಿಳಿಸಬೇಕೆಂದು ಆ ಪ್ರತಿಹಾರಿಗೆ ಹೇಳಿದನು. ಅನಂತರದಲ್ಲಿ ಇರಾಣಪ್ರತಿನಿಧಿಯು ಓಲಗವನ್ನು ಪ್ರವೇಶಿಸಿ, ಪುಲಿಕೇಶಿ ಮಹಾರಾಜನಿಗೆ ನೆಲಮುಟ್ಟಿ ಮೂರು ಸಾರೆ ನಮಸ್ಕರಿಸಿ, ತನ್ನ ದೇಶದಿಂದ ತಂದ ಅಮೌಲ್ಯವಾದ ಹಾಗು ಅಪರೂಪವಾದ ಒಡವೆಗಳನ್ನರ್ಪಿಸಿದನು. ತರುವಾಯ ತನ್ನ ಒಡೆಯನು ಕೊಟ್ಟ ರಾಜಮುದ್ರೆಯ ಪತ್ರಿಕೆಯನ್ನು ಕೊಟ್ಟು:—

"ಕನ್ನಡಸಾರ್ವಭೌಮರೆ, ನಮ್ಮ ಸಮ್ರಾಟರಾದ ಖುಶ್ರು ಬಾದಶಹರ ಆಜ್ಞೆಯ ಮೇರೆಗೆ ತಮ್ಮ ಸನ್ನಿಧಿಗೆ ಅವರ ವಿಜ್ಞಾಪನಾ ಪತ್ರವನ್ನು ತಂದಿರುವೆನು. ಅವಲೋಕಿಸುವದಾಗಬೇಕು." *

ಪುಲಿಕೇಶಿಯು ತನ್ನ ಕರಣಿಕನಿಗೆ ಪತ್ರವನ್ನೋದ ಹೇಳಿದನು.

ಕರ್ನಾಟಕ ಸಾರ್ವಭೌಮರಾದ ಪುಲಿಕೇಶಿ ಮಹಾರಾಜರೆ,

ಮದಾಂಧರಾದ ರೋಮನಾಯಕರ ಉಪಟಳವು ಬಹಳವಾಗಿರುವದು ಅವರ ಪೀಡೆಯು ಪರಿಹಾರವಾಗಬೇಕಾದರೆ, ತಮ್ಮಂತಹರ ಸಹಾಯವು ದೊರೆತ ಹೊರತು ಗತ್ಯಂತರವಿಲ್ಲ. ಅದಕ್ಕಾಗಿ ನನ್ನ ಪ್ರತಿನಿಧಿಯನ್ನು ನನ್ನ ರಾಜಧಾನಿಯಾದ ಇಸ್ಪಹಾನದಿಂದ ಕಳುಹಿಸಿ

* ಇರಾಣದ ಪ್ರತಿನಿಧಿಯು ಸತ್ಯಾಶ್ರಯ ಪುಲಿಕೇಶಿಯನ್ನು ಕಂಡ ಚಿರಸ್ಮರಣೀಯವಾದ ಮತ್ತು ಕನ್ನಡಿಗರ ಅಭಿಮಾನವನ್ನು ಹೆಚ್ಚಿಸುವ ದೊಡ್ಡ ಒಡ್ಡೋಲಗದ ಅಪರೂಪವಾದ ನೋಟವನ್ನು ಅಜಂತೆಯ ಗುಡ್ಡದಲ್ಲಿ ಕೊರೆದ ಒಂದು ಗವಿಯಲ್ಲಿ ಗೋಡೆಯ ಮೇಲೆ ಕಟೆದ ಭವ್ಯವಾದ ಚಿತ್ರದಲ್ಲಿ ಈಗಲೂ ನೋಡಬಹುದು. ಈ ಚಿತ್ರದಲ್ಲಿಯ ಪುಲಿಕೇಶಿ ಸಾರ್ವಭೌಮನ ಮುಖವನ್ನು ಯಾವನೋ ಒಬ್ಬ ದುಷ್ಟನು ಕೆಡಿಸಿ ವಿದ್ರೂಪವಾಗಿ ಮಾಡಿರುತ್ತಾನೆ. (ಕರ್ನಾಟಕ ಸಾಮ್ರಾಜ್ಯ, ಸಂಪುಟ ೧)

ರುವೆನು. ಪ್ರಸಂಗವೊದಗಿದರೆ ಸಹಾಯ ಮಾಡುವೆವೆಂದು ಆಶ್ವಾಸನವಿತ್ತರೆ, ಉನ್ಮತ್ತರಾದ ರೋಮಾಯರೊಡನೆ ಹೋರಾಡಲಿಕ್ಕೆ ಧೈರ್ಯವಾಗುವದು. ವಿಕ್ರಮಾರ್ಜಿತ ಸತ್ವಶಾಲಿಗಳಾದ ನಿಮ್ಮ ಹೊರತು ತಾರಕರಿಲ್ಲವೆಂಬದನ್ನು ನಾನು ಮನಗಂಡಿರುವೆನು. ಇರಾಣದ ಮಳಲಿನ ಪ್ರದೇಶದಲ್ಲಿಯೂ, ಹಿಮಾಲಯದ ಗುಡ್ಡಗಾಡು ಪ್ರದೇಶದಲ್ಲಿಯೂ ತೊಳಲಿ-ಬಳಲಿ ನನ್ನ ಪ್ರತಿನಿಧಿಯು ತಮ್ಮ ಸನ್ನಿಧಿಗೆ ಬಂದಿರುವನು. ಅವನೊಡನೆ ಅಭಯ ಪತ್ರಿಕೆಯನ್ನು ಕಳುಹಿಸಬೇಕೆಂದು ಅಂಗಲಾಚಿ ಬೇಡಿಕೊಳ್ಳುವೆನು.

ತಮ್ಮ ಸಹಾಯಾಪೇಕ್ಷಿ,

ಖುಶ್ರು ಬಾದಶಹ, ಇಸ್ಪಹಾನ (ಇರಾಣ)

ಕರಣಿಕನು ಪತ್ರವನ್ನೋದಿದ ಕೂಡಲೆ ಓಲಗದ ಜನರು ಪರಮ ವಿಸ್ಮಿತರಾದರು. ತಮ್ಮ ಕರ್ನಾಟಕ ಸಾಮ್ರಾಜ್ಯದ ಹಾಗು ಪುಲಿಕೇಶಿ ಮಹಾರಾಜರ ಪ್ರಸಿದ್ಧಿಯು ದ್ವೀಪಾಂತರದಲ್ಲಾದರೂ ಪಸರಿಸಿರುವದನ್ನು ನೋಡಿ ಅವರು ಕಡು ಸಂಭ್ರಮಗೊಂಡರು. ಕನ್ನಡಿಗರ ಯಶೋದುಂದುಭಿಯು ಇಡಿ ಜಗತ್ತನ್ನೇ ಗಡಚಿಕ್ಕಿಸಲಿಕ್ಕೆ ತಮ್ಮ ಚಕ್ರವರ್ತಿಯ ಅದ್ವಿತೀಯ ಪರಾಕ್ರಮವೇ ಕಾರಣವೆಂದು ಅವರು ತಿಳಿದರು.

ಪುಲಿಕೇಶಿ ಮಹಾರಾಜನು ಅಂದಿನ ಓಲಗದ ಕೆಲಸವನ್ನು ಮುಗಿಸಿದನು. ಮಂತ್ರಿ-ಸೇನಾಪತಿಗಳೊಡನೆ ಆಪ್ತಾಲೋಚನೆಯನ್ನು ಮಾಡಿಕೊಂಡು ರಾಯಭಾರಿಗೆ ಉತ್ತರವೀಯಬೇಕೆಂದು ಅವನ ಮನೀಷೆಯಿದ್ದುದರಿಂದ, ಅಂದು ಆ ಪ್ರತಿನಿಧಿಗೆ ಯಾವ ವಿಧದ ಆಶ್ವಾಸನೆಯನ್ನೂ ಕೊಡಲಿಲ್ಲ. ಅವನನ್ನು ಸನ್ಮಾನಿಸಿ ಯಥೋಚಿತವಾದ ಆದರಾತಿಥ್ಯ ಮಾಡುವದಕ್ಕಾಗಿ ಪುಲಿಕೇಶಿಯು ಮಂತ್ರಿಯಾದ ವೀರಸೇನನಿಗೆ ಆಜ್ಞಾಪಿಸಿದನು. ಅಂದಿನ ರಾತ್ರಿಯಲ್ಲಿ ಅರಮನೆಯಲ್ಲಿಯೇ ಮಂತ್ರಿ-ಸೇನಾನಾಯಕರನ್ನು ಕರೆಯಿಸಿ, ಪುಲಿಕೇಶಿಯು ಅವನಿಗೆ ಯಾವ ವಿಧದ ಉತ್ತರವನ್ನೀಯಬೇಕೆಂಬ ಬಗ್ಗೆ ಊಹಾಪೋಹೆ

ನಡೆಯಿಸಿದನು. ನಾಮಾಂಕಿತ ಸಾರ್ವಭೌಮರಾದವರ ಬೆನ್ನಿಗೆ ಬಿದ್ದರೆ ತನ್ನ ರಕ್ಷಣೆಯಾಗುವದೆಂಬ ನಂಬಿಗೆಯಿಂದ ಇರಾಣದ ಬಾದಶಹನು ವಿಜ್ಞಾಪನಾಪತ್ರಿಕೆಯನ್ನು ಕಳುಹಿಸಿರುವನಾದ್ದರಿಂದ, ಆ ಶರಣಾಗತನನ್ನು ರಕ್ಷಿಸುವದು ಕನ್ನಡಿಗರ ಕರ್ತವ್ಯವಾಗಿರುವದೆಂದು ವೀರಸೇನ-ಪ್ರತಾಪವರ್ಮರು ಅಭಿಪ್ರಾಯಪಿತ್ತರು. ತನ್ನ ಮನಸ್ಸಿನಂತೆ ಮಂತ್ರಿ ಸೇನಾಧ್ಯಕ್ಷರು ಮತವನ್ನು ಪ್ರಕಟಿಸಿದ್ದಕ್ಕಾಗಿ ಪುಲಿಕೇಶಿಯು ಆನಂದಬಟ್ಟನು ಯುರೋಪೀಯರೊಡನೆ ಕಾದಿ ಅವರನ್ನು ಮುರಿಬಡಿದು ಜಯಭೇರಿಯನ್ನು ಹೊಡೆಯಿಸುತ್ತ ಬರುವ ಸುಯೋಗವನ್ನು ಎಂದೂ ವ್ಯರ್ಥವಾಗಗೊಡಬಾರದೆಂದು ಅವನು ನಿಶ್ಚಯಿಸಿಕೊಂಡಿದ್ದನು. ರೋಮಾಯರೊಡನೆ ಕಾದಿ ಜಯಶಾಲಿಯಾದರೆ ಮಾತ್ರ ಕನ್ನಡಿಗರ ಯಶೋದುಂದುಭಿಯು* ಇಡೀ ಜಗತ್ತನ್ನು ಗಡ ಚಿಕ್ಕಿಸುವದೆಂದು ಅವನು ತಿಳಿದುಕೊಂಡನು.

ಮಾರನೆಯ ದಿವಸ ಪ್ರಾತಃಕಾಲದಲ್ಲಿ ಓಲಗವು ಕೂಡಿಸಲ್ಪಟ್ಟಿತು. ತಮ್ಮ ಮಹಾರಾಜನು ಇರಾಣದ ಪ್ರತಿನಿಧಿಗೆ ಏನು ಉತ್ತರ ಕಳುಹಿಸುವನು? ಎಂಬದನ್ನು ಕೇಳುವದಕ್ಕಾಗಿ ಅಂದಿನ ಸಭೆಯಲ್ಲಿ ಬಹಳ ಜನರು ಕೂಡಿದ್ದರು ಆಗ ಪುಲಿಕೇಶಿಯು ಪ್ರತಿನಿಧಿಯನ್ನು ಕುರಿತು:—

"ಪ್ರತಿನಿಧಿಗಳೆ, ನೀವು ಯಾವ ವೇಳೆಗೆ ಬೇಡುವಿರೋ, ಆ ವೇಳೆಗೆ ನಿಮ್ಮ ಬಾದಶಹರಿಗೆ ಬೇಕಾದಷ್ಟು ಸಹಾಯವನ್ನು ಒದಗಿಸುವೆನು. ನಿಮ್ಮ ಧನಿಯರಿಗೆ ನಿಶ್ಚಿಂತರಾಗಬೇಕೆಂದು ತಿಳಿಸಿರಿ. ಬರೇ ರೋಮಾಯರನ್ನಷ್ಟೇ ಏಕೆ? ಇಡೀ ಯುರೋಪೀಯರ ಖಂಡವನ್ನು ಸಹ ಜಯಿಸುವ ಸಾಮರ್ಥ್ಯವು ಕರ್ನಾಟಕ ಸಾಮ್ರಾಜ್ಯದಲ್ಲಿರುವದು. ನೀವು ಕರೆಯುವದಷ್ಟೇ ತಡವು; ಆ ಕ್ಷಣವೇ ನಾವು ಬಂದು ಬಿಡುವೆವು" ಎಂದು ನುಡಿದು, ಅವನು ಕರಣಿಕನನ್ನು ಕುರಿತು: "ಖುಶ್ರು

* ಪುಲಿಕೇಶಿಯು ಯುರೋಪಖಂಡದ ರೋಮಾಯರೊಡನೆ ಕಾದುವ ಪ್ರಸಂಗವು ಯಾವ ಕಾರಣದಿಂದಲೋ ತಪ್ಪಿತು.

ಬಾದಶಹರಿಗೆ ಇದೇ ಆಶಯದ ಪತ್ರ ಬರೆಯಿರಿ" ಎಂದು ಹೇಳಿದನು.

ಕರಣಿಕನು ಪತ್ರ ಬರೆದು ರಾಜಮುದ್ರೆಯನ್ನು ಹಾಕಿದನು. ಅದನ್ನು ಪುಲಿಕೇಶಿ ಮಹಾರಾಜನು ತಾನೇ ಆ ಪ್ರತಿನಿಧಿಯ ಸ್ವಾಧೀನದಲ್ಲಿ ಕೊಟ್ಟನು. ಕನ್ನಡ ಸಾರ್ವಭೌಮನ ಈ ಔದಾರ್ಯವನ್ನೂ, ದೀನ ವಾತ್ಸಲ್ಯವನ್ನೂ, ಪರೋಪಕಾರ ಪರಾಯಣತೆಯನ್ನೂ, ವೀರೋಚಿತ ವೃತ್ತಿಯನ್ನೂ ನೋಡಿ, ಅವನು ದಂಗು ಬಡೆದನು. "ಕರ್ನಾಟಕ ಸಾರ್ವಭೌಮನ ಯೋಗ್ಯತೆಯು ದೊಡ್ಡದಿರುವದು. ಅಂತೆಯೇ ಕನ್ನಡಿಗರ ಯಶೋದುಂದುಭಿಯು ಜಗತ್ತಿನಲ್ಲೆಲ್ಲ ಕೇಳತೊಡಗಿರುವದು!" ಎಂದು ಅವನು ಉದ್ಗಾರ ತೆಗೆದನು!

---

## ಗೃಹಕಲಹದ ವಿಷಬೀಜಾರೋಪಣ.

"ಪ್ರಿಯೆ, ನಿನ್ನ ಜನ್ಮಭೂಮಿಯು ರೇವತಿ ದ್ವೀಪವು. ವಿಜಯ ಮಹಾದೇವಿ ರಾಣಿಯವರು ನಿನ್ನ ಬಾಲ್ಯದ ಗೆಳತಿಯರು. ಹೀಗಿದ್ದು ಅಲ್ಲಿ ಹೋಗಿ ಸೌಖ್ಯದಿಂದ ಕಾಲಹರಣ ಮಾಡುವದಕ್ಕೆ ನೀನು ಅನುಮಾನಿಸುವೆಯೇಕೆ?"

"ಪ್ರಿಯಕರಾ, ರೇವತಿದ್ವೀಪದಲ್ಲಿ ನಾನು ಹುಟ್ಟಿದ್ದರೂ, ವಿಜಯ ಮಹಾದೇವಿ ರಾಣಿಯವರು ನನ್ನ ಪ್ರೀತಿಯ ಸಖಿಯರಾಗಿದ್ದರೂ ನಾನು ವಾತಾಪಿಪುರವನ್ನು ಬಿಡಲಿಕ್ಕೆ ಒಪ್ಪುವದಿಲ್ಲ. ಕರ್ನಾಟಕದ ಗೌರವದ ಸ್ಥಾನವಾದ ಈ ರಾಜಧಾನಿಯು ನನಗೆ ಅಮರಾವತಿಯಂತೆ ತೋರುತ್ತಿರುವದು. ನೀವು ರಾಜಧಾನಿಯನ್ನು ಬಿಟ್ಟು ತೆರಳುವದರಿಂದ ವಂಶಪರಂಪರವಾಗಿ ಬಂದ ಸೇನಾಪತಿಯ ಪದಕ್ಕೆ ಎರವಾಗಬಹುದಲ್ಲವೆ? ದಕ್ಷಿಣಾಪಥದ ಸಮ್ರಾಟನ ದಂಡನಾಯಕತ್ವವು ದೊರೆಯಬೇಕೆಂದು ಜನರು ನಾನಾ ಪ್ರಕಾರವಾಗಿ ಪ್ರಯತ್ನಿಸುತ್ತಲಿರುವರು ಮಾವನವರು ಈಗೆ ವೃದ್ಧಾಪ್ಯಸ್ಥಿತಿಗೊಳಗಾಗಿರುವರು. ನೀವು ಅವರ ಕೆಲಸವನ್ನು ಕೈಯಲ್ಲಿ ತೆಗದುಕೊಂಡು, ಶೌರ್ಯ-ಸಾಹಸಗಳನ್ನು ತೋರಿಸುತ್ತ ಘನತೆ ಹೊಂದುವಿರೆಂದು ನಾನು ಆಶೆ

ಗೊಂಡಿರುವೆನು. ನಾನು ವೀರಪುತ್ರಿಯಿರುವೆನು; ವೀರಸ್ನುಷೆಯಾಗಿರುವೆನು; ವೀರಲಲನೆಯಿರುವೆನು; ಆದರೆ ವೀರಪತ್ನಿಯೆಂಬ ಅಭಿಧಾನವು ದೊರೆತ ಹೊರತು ನಾನು ಕೃತಕೃತ್ಯಳಾಗಲಾರೆನು. ನಾಥ, ನಾನು ಅಂತಹ ಭಾಗ್ಯವನ್ನು ಹೊಂದುವದು ನಿಮ್ಮ ಕರ್ತವ್ಯಪ್ರಭಾವದ ಮೇಲೆ ಅವಲಂಬಿಸಿರುವದು. ಬೇಡ; ರೇವತಿದ್ವೀಪಕ್ಕೆ ಹೊರಡುವ ಆಲೋಚನೆಯೇ ಬೇಡ''

"ಪ್ರಿಯೆ, ಸಂಗ್ರಾಮದ ವಾರ್ತೆಯೆಂದರೆ ನನ್ನ ಮೈಗೆ ಮುಳ್ಳೇಹಚ್ಚುತ್ತದೆ. ನಾನು ಶೌರ್ಯ-ಧೈರ್ಯ-ಸಾಹಸಗಳನ್ನು ತೋರಿಸಲಿಕ್ಕಾಗಲಿ, ಮರಣಕ್ಕಾಗಲಿ ಅಂಜಿ ಹೀಗೆ ಕ್ಲೈಬ್ಯವಾದ ಮಾತುಗಳನ್ನಾಡುವೆನೆಂದು ಭಾವಿಸಬೇಡ. ನನ್ನ ತತ್ವವು ಈ ವಿಷಯದಲ್ಲಿ ಬೇರೆ ವಿಧವಾಗಿರುವದು. ಸೇವಾವೃತ್ತಿಯನ್ನು ಎಂತಹರು ಮಾಡತಕ್ಕದ್ದೆಂದರೆ, ಕೇವಲ ಉದರಪೋಷಣೆಗೆ ಅಭಾವವಿದ್ದವರು. ಸೂರ್ಯ-ಚಂದ್ರರಿರುವ ವರೆಗೆ ನಮ್ಮ ಮನೆತನದವರು ಯುದ್ಧಕಾರ್ಯವನ್ನೇ ಮಾಡಬೇಕೆಂಬದು ಎಲ್ಲಿಯ ನ್ಯಾಯವು? ಯುದ್ಧಭೂಮಿಯಲ್ಲಲ್ಲದೆ, ನಮಗೆ ಬೇರೆ ಕಡೆಗೆ ಸ್ವಾಭಾವಿಕವಾದ ಮರಣವು ಬರಬಾರದೆಂದು ಈಶ ಸಂಕಲ್ಪವಿರುವದೇನು? ಅನೇಕ ತಲೆಗಳವರೆಗೆ ಕುಳಿತು ತಿಂದರೂ ಸವೆಯದಷ್ಟು ಐಶ್ವರ್ಯವಿರುವದು. ಹೀಗಿದ್ದ ಮೇಲೆ ದುಃಖಪಡುವ ಕಾರಣವೇನು?''

"ಆ ಐಶ್ವರ್ಯವು ನಿಮ್ಮದಲ್ಲ; ಅದರಲ್ಲಿ ಒಂದು ಕವಡೆಯನ್ನಾದರೂ ಗಳಿಸಿದ್ದರೆ ಅಷ್ಟು ಮಾತ್ರವಾದರೂ ನಿಮ್ಮ ಅಧಿಕಾರವು ನಡೆಯುತ್ತಿತ್ತು. ವ್ರಥಾ ಅವಿಚಾರಕ್ಕೆ ಆಸ್ಪದವೀಯಬೇಡಿರಿ."

"ಆ ಮಾತು ಹಾಗಿರಲಿ; ವಾತಾಪಿಪುರದಲ್ಲಿ ಸೇನಾನಾಯಕತ್ವವನ್ನು ವಹಿಸುವದೆಂದರೆ, ಮೃತ್ಯುದೇವತೆಯ ದವಡೆಯಲ್ಲಿ ಸಿಲುಕಿದಂತೆಯೇ ಸರಿ. ಯಾವಾಗಲೂ ದಂಡಯಾತ್ರೆಯಲ್ಲಿ ತೊಡಗಿರುವ ಅರಸನ ದಳವಾಯಿಯು ಆಗುವದಕ್ಕಿಂತಲೂ ಹಾಳುಬಾವಿಯನ್ನು ಬೀಳುವದೇ ಮೇಲು!''

"ನಿಮ್ಮ ಹುಚ್ಚು ಹಾಳಾಗಲಿ. ಎಲ್ಲಿಯ ವಿಚಾರಗಳಿವು? ಕನ್ನಡಿಗರ ಕೀರ್ತಿಯನ್ನು ಜಗತ್ತಿನಲ್ಲೆಲ್ಲ ಪಸರಿಸಿದ ಪುಲಿಕೇಶಿ ಮಹಾರಾಜರಲ್ಲಿ ಸೇನಾಧಿಪತ್ಯವನ್ನು ವಹಿಸುವ ಬಗ್ಗೆ ನೀವು ಅನುಮಾನಪಟ್ಟ ಬಳಿಕ ನಿಮ್ಮಲ್ಲಿ ಪೌರುಷವೇ ಇಲ್ಲವೆನ್ನಬೇಕಾಗುವದು. ನೀವು ಕೇವಲ ಉತ್ತರ ಪೌರುಷಿಗಳು. ನಿಜವಾದ ಕ್ಷಾತ್ರವೃತ್ತಿಯು ನಿಮ್ಮಲ್ಲಿಲ್ಲ. ಕೇವಲ ವಿಲಾಸೋಪಭೋಗಗಳನ್ನು ಅನುಭವಿಸುತ್ತ ಕಾಲಹರಣ ಮಾಡುವದೇ ಪುರುಷಾರ್ಥವೆಂದು ನಿಮ್ಮ ಭಾವನೆಯಾಗಿದೆ. ವೀರಪತ್ನಿಯೆಂದೆನಿಸಿಕೊಳ್ಳುವ ಭಾಗ್ಯವು ನನಗೆ ಲಭಿಸಬಾರದೆಂದು ಈಶ ಸಂಕಲ್ಪವಿದ್ದರೆ ಯಾರು ಮಾಡುವದೇನು?"

ಶಾಂತಿವರ್ಮ-ರೇವತಿದೇವಿಯರಲ್ಲಿ ಈ ಬಗೆಯಾಗಿ ಸಂಭಾಷಣವು ನಡೆದಿತ್ತು. ಪತಿಯನ್ನು ಕರ್ತವ್ಯದಲ್ಲಿ ತೊಡಗಿಸಬೇಕೆಂದು ರೇವತಿದೇವಿಯು ಸತತವಾಗಿ ಪ್ರಯತ್ನ ನಡೆಯಿಸಿದ್ದಳು. ಅವನು ಸಂಗರದಲ್ಲಿ ಕಾದಿ ವೀರಶ್ರೀಯನ್ನು ಸೆಳೆದರೆ, ತಾನು ನಿಜವಾದ ಭಾಗ್ಯವತಿಯಾಗುವೆನೆಂದು ಆ ವೀರವನಿತೆಯು ತಿಳಿದಿದ್ದಳು ಕೇವಲ ವಿಲಾಸದಲ್ಲಿಯೇ ಕಾಲ ಕಳೆಯತೊಡಗಿ, ನಿಜವಾದ ಕ್ಷಾತ್ರವೃತ್ತಿಯಿಂದ ನಡೆಯುವದಕ್ಕೆ ಹಿಂಜರಿಯುವ ಪತಿಯನ್ನು ಅವಳು ಈಗ ತಿರಸ್ಕಾರ ದೃಷ್ಟಿಯಿಂದ ನೋಡತೊಡಗಿದ್ದಳು. ಹೀಗಿದ್ದರೂ ಅವಳು ತನ್ನ ಹೃದಯದೇವನಲ್ಲಿ ಭಕ್ತಿಯುಳ್ಳವಳಾಗಿಯೇ ಇದ್ದಳು ದಕ್ಷಿಣಾಪಥವನ್ನೆಲ್ಲ ಕರ್ನಾಟಕ ಸಾಮ್ರಾಜ್ಯಕ್ಕೊಳಪಡಿಸಿದ ವೀರಸಮ್ರಾಟ, ಸತ್ಯಾಶ್ರಯ ಪುಲಿಕೇಶಿಯು ದಂಡನಾಯಕನಾಗಿ, ಅನೇಕ ಬಗೆಯ ಶೌರ್ಯ-ಸಾಹಸಗಳನ್ನು ತೋರಿಸುತ್ತ ಕೀರ್ತಿಶಾಲಿಯಾಗಬೇಕೆಂದು ಅವಳು ಪತಿಗೆ ಬೋಧಿಸತೊಡಗಿದ್ದಳು ಅವಳ ಆ ಪ್ರಯತ್ನವು ಬೋರ್ಗಲ್ಲ ಮೇಲೆ ಮಳೆಗರೆದಂತೆ ನಿಷ್ಪ್ರಯೋಜಕವಾಗತೊಡಗಿತ್ತು.

ಕಂಚಿಯ ಮಹೇಂದ್ರವರ್ಮನು ಸ್ವತಂತ್ರನಾಗಬೇಕೆಂದು ಸಾಹಸ ನಡೆಯಿಸಿದ್ದರಿಂದಲೂ, ಪುಲಿಕೇಶಿಯ ರಾಜ್ಯದಲ್ಲಿ ಸುಲಿಗೆಗಾರಂಭಿಸಿದ್ದರಿಂದಲೂ ಪುಲಿಕೇಶಿಯು ಅವನ ಮೇಲೆ ದಂಡೆತ್ತಿ

ಹೋಗಬೇಕೆಂದು ಸಿದ್ಧತೆಯಲ್ಲಿ ತೊಡಗಿದ್ದನು. ಈ ದಂಡಯಾತ್ರೆ ಗಾಗಿ ಪತಿಯನ್ನು ಕಳಿಸಬೇಕೆಂದು ರೇವತಿಯು ನಿರ್ಧರಿಸಿಕೊಂಡು, ತನ್ನ ಮಂದಿರದ ಉಪವನದಲ್ಲಿ ಜಾತಮಂಟಪದ ಬಳಿಯಲ್ಲಿ ಕುಳಿತು ಪತಿಯೊಡನೆ ಮಾತನಾಡತೊಡಗಿದ್ದಳು. ಶಾಂತವರ್ಮನು ಅವಳ ಮಾತಿಗೊಪ್ಪದೆ, ಕ್ಷಾತ್ರವೃತ್ತಿಗೆ ಭಂಗ ಬರುವ ಮಾತನಾಡಿದ್ದರಿಂದ, ಅವಳಿಗೆ ಪರಮಾವಧಿ ವ್ಯಸನವಾಯಿತು. ರಾಷ್ಟ್ರಕಾರ್ಯಕ್ಕಾಗಿ ಹೆಣಗಾಡುವದಕ್ಕೆ ಅಬಲೆಯಾದ ನನ್ನ ಬಾಹುಗಳು ಸಹ ಸ್ಫುರಣ ಹೊಂದುತ್ತಿರಲು, ಪುರುಷರಾದ ಇವರ ಮನಸ್ಸು ಇಷ್ಟೇಕೆ ಭೀರು ವಾಗಿರುವದೆಂದು ಅವಳು ಯೋಚಿಸತೊಡಗಿದಳು. ಪತಿಯ ಸ್ಪಷ್ಟೋಕ್ತಿಯನ್ನು ಕೇಳಿ ಅವಳ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಆಗ ಅವಳು ನಿರುತ್ಸಾಹದಿಂದಲೂ ಖೇದದಿಂದಲೂ ಬಾಷ್ಪಪೂರಿತನಯನೆಯಾಗಿ ಸುಮ್ಮನೆ ಕುಳಿತಳು. ಶಾಂತಿವರ್ಮನು ಅವಳ ಸ್ಥಿತಿಯನ್ನು ನೋಡಿ ಮನಕರಗಿದವನಾಗಿ, ಅವಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಸುಕೋಮಲವಾದ ಗಲ್ಲಗಳನ್ನು ಹಿಡಿದು:—

"ಪ್ರಿಯೆ, ನೀನು ಹೀಗೆ ಶೋಕಿಸುವದೇಕೆ? ನನ್ನಿಂದ ಯಾವ ಬಗೆಯ ಪರಾಕ್ರಮವು ಪ್ರಕಟವಾಗಲಿಲ್ಲವೆಂಬದೇ ನಿನ್ನ ಚಿಂತೆಯ ಕಾರಣವಲ್ಲವೆ? ಆದರ್ಶ ಕ್ಷಾತ್ರಲಲನೆಯಾದ ನಿನ್ನಲ್ಲಿ ಇಂತಹ ವೃತ್ತಿಯಿದ್ದದ್ದು ನೋಡಿ ನನಗೆ ಆನಂದವೆನಿಸಿದೆ. ರೇವತಿದ್ವೀಪದಲ್ಲಿ ಕುಮಾರ ಚಂದ್ರಾದಿತ್ಯರು ನನಗೆ ಸೇನಾಪತಿ ಪದವನ್ನೇ ಕೊಡಬೇಕೆಂದು ನಿರ್ಧರಿಸಿರುವರು. ನನಗೆ ನಾತಾಪಿಪುರವು ಯಾವದೋ ಒಂದು ಅಜ್ಞಾತ ಕಾರಣದಿಂದ ಬೇಸರಾಗಿರುವದು. ಇಲ್ಲಿ ನಾನು ಯಾವ ಬಗೆಯ ಕಾರ್ಯ ಮಾಡುವದಕ್ಕೂ ಮನಸ್ಸಿಲ್ಲದವನಾಗಿರುವೆನು. ಅಂತೆಯೇ ರೇವತಿ ದ್ವೀಪಕ್ಕೆ ಹೊರಡಬೇಕೆಂದು ನಿಶ್ಚಯಿಸಿರುವೆನು. ಅಲ್ಲಿ ನಾನು ದಂಡನಾಯಕನಾದ ಬಳಿಕ, ನನ್ನ ಶೌರ್ಯ-ಸಾಹಸಗಳು ತಾನಾಗಿಯೇ ವ್ಯಕ್ತವಾಗುವವಲ್ಲವೆ?"

"ಸಮ್ರಾಟನಲ್ಲಿದ್ದು ಶೌರ್ಯ-ಸಾಹಸಗಳನ್ನು ವ್ಯಕ್ತಪಡಿಸದ

ನೀವು ಮಂಡಲೇಶ್ವರರಾದ ಆ ಚಂದ್ರಾದಿತ್ಯರಲ್ಲಿ ಯಾವ ಕಾರ್ಯವನ್ನೂ ಮಾಡಲಾರಿರೆಂಬದು ನನಗೆ ತಿಳಿಯುತ್ತದೆ. ನಾವೀರ್ವರೂ ದುರ್ದೈವಿಗಳಿರುವೆವು. ಅಂತೆಯೇ ಈ ಬಗೆಯು ಬುದ್ಧಿಯು ನಿಮ್ಮಲ್ಲಿ ಹುಟ್ಟಿರುವದು.''

''ನಾಪು ಸ್ಪಷ್ಟವಾಗಿ ನಿನಗೆ ಹೇಳಿ ಬಿಡುವೆನು; ನಾನಿನ್ನು ವಾತಾಪಿಪುರದಲ್ಲಿರುವದಿಲ್ಲ.''

''ನಿಮ್ಮ ಮನಸ್ಸು ಈ ಬಗೆಯು ವಿಪರ್ಯಾಸವನ್ನು ಹೊಂದುವದಕ್ಕೆ ಕಾರಣವೇನು!''

''ಕಾರಣವನ್ನು ನೀನು ಕೇಳಬೇಡ; ನಾನು ಹೇಳುವದಿಲ್ಲ.''

''ನನ್ನ ಮುಂದೆ ಹೇಳದಷ್ಟು ಮಹತ್ವದ ಕಾರಣವೇನಿರುವದೆ''ಂದು ರೇವತಿಯು ಪ್ರೇಮಾಭಿನಯ ಮಾಡುತ್ತ: ''ಸಹಧರ್ಮಚಾರಿಣಿಯ ಮುಂದೆ ಹೃದ್ಗತವನ್ನು ಮುಚ್ಚಿಡುವದು ಧರ್ಮವೆ?''

''ಅಂತಹ ಮಹತ್ವದ ಕಾರಣವೇನೂ ಇಲ್ಲ. ಚಂದ್ರಾದಿತ್ಯರು ನನ್ನ ಪರಮಸ್ನೇಹಿತರಿರುವದರಿಂದ, ಅವರ ಕಡೆಗೇ ನನ್ನ ಮನಸ್ಸು ಜಗ್ಗುತ್ತಿರುವದು. ಮನಸ್ಸಿನ ನೈಸರ್ಗಿಕ ಧರ್ಮಕ್ಕೆ ಯಾರೇನು ಮಾಡುವದು?''

''ಅಲ್ಲಲ್ಲ; ನೀವು ಮನೋಗತವನ್ನು ಬಚ್ಚಿಟ್ಟಿರಿ. ವಾತಾಪಿಪುರದಲ್ಲಿ ಕಾಲೂರಿ ನಿಲ್ಲುವದು ನಿಮಗೆ ತಿರಸ್ಕರಣೀಯವಾದ ಮೇಲೆ, ಮತ್ತೊಂದು ಮಹತ್ವದ ಕಾರಣವೇನಾದರೂ ಇರಬಹುದೆಂದು ನನ್ನ ತರ್ಕವಿರುವದು. ನಾಥರೆ, ನನ್ನೆದುರಿನಲ್ಲಿ ಹೀಗೆ ಮೋಸಗಾರಿಕೆ ತೋರಿಸುವದು ಯೋಗ್ಯವೆ?''

''ಶಾಂತಿವರ್ಮನು ಪತ್ನಿಯು ಈ ಮಾತಿನಿಂದ ಗೊಂದಲದಲ್ಲಿ ತೊಡಗಿದನು. ತನ್ನ ಮನೋಗತವನ್ನು ಪತ್ನಿಯ ಮುಂದೆ ಹೇಳಬಾರದೆಂದು ಅವನು ಸಂಕಲ್ಪ ಮಾಡಿಕೊಂಡಿದ್ದರೂ, ಹೇಳಿದ ಹೊರತು ಗತ್ಯಂತರವಿಲ್ಲದ ಪ್ರಸಂಗವೊದಗಿ, 'ಹೇಳಲೋ-ಬೇಡವೋ' ಎಂದು ವಿಚಾರ ಮಾಡಲಾರಂಭಿಸಿದನು. ಅವನು ಪತ್ನಿಯಲ್ಲಿ ಅತಿ

ಶಯು ಅನುರಾಗವುಳ್ಳವನಾಗಿದ್ದರೂ, ಸ್ವಭಾವ ಭಿನ್ನತೆಯಿಂದ ಆ ಪ್ರೇಮಕ್ಕೆ ಅಲ್ಪ ಸ್ವಲ್ಪ ವ್ಯತ್ಯಾಸವುಂಟಾಗಿತ್ತು. ಅಂತೆಯೇ ಅವನು ತನ್ನ ಪ್ರಿಯತಮೆಯೊಂದಿಗೆ ಗುಟ್ಟುಗೊಟ್ಟು ಮಾತನಾಡುತ್ತಿದ್ದಿಲ್ಲ.

"ಪ್ರಿಯೆ, ಆ ಮಾತು ಏನೇ ಇರಲಿ, ನೀನು ನನ್ನೊಡನೆ ರೇವತಿ ದ್ವೀಪಕ್ಕೆ ಬರಲು ಸಿದ್ಧಳಾಗುವಿಯೋ-ಇಲ್ಲವೋ?"

"ಇದೇನು ಮಾತನಾಡುವಿರಿ? ನೀತಿಗೆ ಬಾಧೆ ಬಾರದಂತಹ ಮಾರ್ಗವನ್ನು ಹಿಡಿಯಲಿಕ್ಕೆ ನಾನು ಸಿದ್ಧಳಿರುವೆನು. ತಮ್ಮ ಆಜ್ಞೆಯಾದರೆ ಪ್ರಜ್ವಲಿತ ಅಗ್ನಿಕುಂಡದಲ್ಲಿ ಧುಮುಕುವದಕ್ಕಾದರೂ ನಾನು ಅಂಜುವದಿಲ್ಲ."

"ಇದು ಮೇಲಣ ಮಾತು."

"ನಾಥರೆ ಅದೇಕೆ? ನಾನು ಎಂದಾದರೂ ತಮ್ಮ ಆಜ್ಞಾಬಾಹಿರಳಾದದ್ದು ಸ್ಮರಣೆಯಲ್ಲಿರುವದೆ?"

"ಹಾಗಾದರೆ ನಾಳೆಗೇ ರೇವತೀದ್ವೀಪಕ್ಕೆ ನನ್ನೊಡನೆ ತೆರಳು."

"ರೇವತಿ ದ್ವೀಪಕ್ಕೆ ಹೊರಡಲು ಕಾರಣವೇನೆಂಬದನ್ನು ತಿಳಿಸಿರಿ. ಯಾವದೊಂದು ಕಾರ್ಯವನ್ನು ಮಾಡಬೇಕಾದರೆ ಅದರಲ್ಲಿ ಪತಿಯ ಹಿತಾಹಿತಗಳೇನಿರುವವೆಂಬದನ್ನು ಪರೀಕ್ಷಿಸುವದು ಪತ್ನಿಯರ ಧರ್ಮವಾಗಿರುವದು."

"ಅದಕ್ಕೇ ನಾನು ಮೇಲಣ ಮಾತನಾಡುವವಳೆಂದೆನು."

"ಪ್ರಿಯನಾಥ, ಹೀಗೆ ಮರ್ಮಭೇದಕವಾದ ಮಾತನಾಡಬೇಡಿರಿ. ನೀವು ರೇವತಿ ದ್ವೀಪದಲ್ಲಿ ಹೋಗಿ ಸ್ವೈರಸಂಚಾರಿಗಳಾಗಿ ದುರ್ಮಾರ್ಗಪ್ರವೃತ್ತರಾಗಬಾರದೆಂದೂ, ಕ್ಷತ್ರಿಯೋಚಿತ ರಾಷ್ಟ್ರಧರ್ಮನಿರತರಾಗಿರಬೇಕೆಂದೂ ನಾನು ಇಚ್ಛೆಯುಳ್ಳವಳಾಗಿರುವದರಿಂದಲೇ ಕರ್ನಾಟಕದ ಕರ್ಮಕ್ಷೇತ್ರವಾದ ವಾತಾಪಿಪುರವನ್ನು ಬಿಡಲಾರದವಳಾಗಿರುವೆನು. ನಿಮ್ಮಿಂದ ರೇವತಿದ್ವೀಪದಲ್ಲಿ ಹೆಚ್ಚಾದ ರಾಷ್ಟ್ರಕಾರ್ಯವು ಜರಗುವಂತಿದ್ದರೆ, ನಿಮ್ಮ ಬೆನ್ನ ಹಿಂದೆ ಬರಲಿಕ್ಕೆ ನಾನು ಹಿಂದೇ ಕಾಲಮೇಲೆ ಸಿದ್ಧಳಿರುವೆನು."

"ಪ್ರಿಯೆ, ನೀನು ನನ್ನೊಡನೆ ಬರುವದಕ್ಕೆ ಆಶ್ವಾಸನೆಯಿತ್ತರೆ, ನಾನು ರಾಜಧಾನಿಯನ್ನು ತ್ಯಜಿಸುವ ಕಾರಣವನ್ನು ಹೇಳುವೆನು."

"ರಾಜಧಾನಿಯನ್ನು ತ್ಯಜಿಸಬೇಕಾದ ವಿಚಾರವು ಉದಾತ್ತವಿದ್ದರೆ, ನಾನು ನಿಮ್ಮೊಡನೆ ಬರುವದಕ್ಕೆ ಸಿದ್ಧಳಿರುವೆನು" ಎಂದು ನುಡಿದು, ರೇವತಿಯು ಮಂದಹಾಸದಿಂದ: "ಪ್ರಿಯಕರಾ, ಒಂದು ವೇಳೆ ಹಾಗಿರದಿದ್ದರೆ ನಿಮ್ಮನ್ನು ನಾನು ರೇವತಿದ್ವೀಪಕ್ಕೆ ಎಂದೂ ಹೋಗಗೊಡಲಾರೆನು."

"ಕಟ್ಟಿ ಹಾಕುವೆಯೇನು?"

"ಓಹೋ! ನಿಶ್ಚಯವಾಗಿಯೂ ಬಂಧಿಸುವೆನು."

"ಆ ಬಂಧನೆಯನ್ನು ಹರಿದೊಗೆಯಲು ನಾನು ಸಮರ್ಥನೇ ಇರುವೆನು."

"ಪ್ರಮದೆಯರ ಪ್ರೇಮಪಾಶವು ದುರ್ನಿವಾರವಾದದ್ದಾಗಿರುವದು" ಎಂದು ರೇವತಿಯು ಮುಗುಳುನಗೆಯಿಂದ ನುಡಿದು, ಪತಿಯ ಕೊರಳಲ್ಲಿ ತನ್ನ ಬಾಹುಪಾಶಗಳನ್ನು ಹಾಕಿ:—"ಹೇಳಿರಿ, ನಿಮ್ಮ ಮನೋಗತವನ್ನು ಹೇಳಿರಿ."

"ಹೇಳಲಾ?"

"ಅವಶ್ಯವಾಗಿ ಹೇಳಿರಿ."

"ಪುಲಿಕೇಶಿ ಮಹಾರಾಜರ ಬಗ್ಗೆ ನಿನ್ನ ಅಭಿಪ್ರಾಯವೇನಿದೆ?"

"ಅವರ ಗುಣಗೌರವವು ಜಗದ್ವಿಖ್ಯಾತವಿರುವದು. ಅವರು ನಿಮಗೆ ಅರಿಯದವರಿರುವರೇನು?"

"ಸೂಕ್ಷ್ಮವಾಗಿ ವಿಚಾರಿಸಿ ಹೇಳು."

"ಬೇಕಾದ ಹಾಗೆ ಸೂಕ್ಷ್ಮದೃಷ್ಟಿಯಿಂದ ನೋಡಿರಿ. ಪುಲಿಕೇಶಿ ಮಹಾರಾಜರೆಂದರೆ, ಭೂಲೋಕದ ದೇವೇಂದ್ರನಿಗೆ ಸರಿಯಾದವರೆಂದು ಹೇಳಲು ಬಾಧಕವಿಲ್ಲ."

"ದೇವೇಂದ್ರನಿರಲಿ, ಕುಬೇರನಿರಲಿ; ಯಾವನೇ ಇರಲೊಲ್ಲನೇಕೆ? ಅವನ ಸ್ವಭಾವವು ಹೇಗಿರುವದು?"

"ನಾಥರೆ, ಅನ್ನದಾತರೂ, ಗೌರವಮುಪಂಡಿತರಾದ ಕರ್ನಾಟಕದ ಸಮ್ರಾಟರೂ ಆದ ಮಹಾವಿಭೂತಿಗಳಿಗೆ ಏಕವಚನವನ್ನು ಪ್ರಯೋಗಿಸುವದು ಯೋಗ್ಯವಲ್ಲ."

"ಇರಲಿ ಬಿಡು; ಅವರ ಸ್ವಭಾವವು ಹೇಗಿರುವದು?"

"ಅವರ ಸದ್ಗುಣಗಳ ವರ್ಣನೆಯನ್ನು ಪಾಮರಳಾದ ನಾನು ಎಷ್ಟೆಂದು ಮಾಡಲಿ? ಕರ್ನಾಟಕದ ಯಶೋದುಂದುಭಿಯನ್ನು ಜಗತ್ತಿನಲ್ಲೆಲ್ಲ ಮೊಳಗಿಸಿದ ಅಪ್ರತಿಮ ಕೀರ್ತಿಶಾಲಿಗಳಾದ ಮಹಾನುಭಾವರ ಮಹಾತ್ಮೆಯನ್ನು ಒಂದು ನಾಲಿಗೆಯಿಂದ ಹೇಳಲು ಸಾಧ್ಯವಿರುವದೇ"

"ನೀನು ಹುಚ್ಚಳಿರುವೆ!"

"ಅದೇಕೆ? ಅವರ ವಿಷಯದಲ್ಲಿ ನೀವು ಕಲುಷಿತಮನಸ್ಕರಾಗಿರುವಿರೇನು?"

"ಅವರು ಭೇದಭಾವಯುಕ್ತರಿರುವರು."

"ಇದೇನು ಮಾತನಾಡುವಿರಿ?" ಎಂದು ರೇವತಿದೇವಿಯು ವಿಸ್ಮಯಚಕಿತಳಾಗಿ ನುಡಿಯಲು, ಶಾಂತಿವರ್ಮನು ಸಿಟ್ಟಿನ ಆವಿರ್ಭಾವವನ್ನು ತೋರಿಸುತ್ತ:—"ಪಟ್ಟಬಾಧ್ಯನನ್ನು ಮಂಡಲೇಶ್ವರನನ್ನು ಮಾಡಿ, ಮೂರನೆಯ ಮಗನಾದ ವಿಕ್ರಮಾದಿತ್ಯನಿಗೆ ಸಿಂಹಾಸನವನ್ನು ಕೊಡಬೇಕೆಂದು ಯತ್ನಿಸುತ್ತಿರುವ ಪುಲಿಕೇಶಿ ಮಹಾರಾಜರನ್ನು ಮಹಾನುಭಾವರೆಂದು ನಿನ್ನಂತಹ ಹುಚ್ಚರ ಹೊರತು ಮತ್ತಾರು ಹೇಳುವರು?"

"ವಿಕ್ರಮಾದಿತ್ಯರು ಪಟ್ಟಬಾಧ್ಯರಿರದಿದ್ದರೂ, ಅವರ ಯೋಗ್ಯತೆಯು ಪುಲಿಕೇಶಿ ಮಹಾರಾಜರಿಗೆ ಸರಿಯಾದದ್ದಾಗಿರುವದು. ಅವರು ಮಿಕ್ಕವರಿಗಿಂತ ಹೆಚ್ಚಿನ ಕರ್ತವ್ಯಪ್ರಭಾವವುಳ್ಳವರಿದ್ದುದರಿಂದ, ತಮ್ಮ ತರುವಾಯ ಅವರೇ ಪಟ್ಟಬಾಧ್ಯರಾಗಬೇಕೆಂದು ಪುಲಿಕೇಶಿ ಮಹಾರಾಜರು ಇಚ್ಛೆಯುಳ್ಳವರಾಗಿದ್ದುದರಲ್ಲೇನೂ ಅನ್ಯಾಯವಿಲ್ಲ. ಕಷ್ಟಾರ್ಜಿತವಾದ ಸ್ವತ್ತು ಚಿರಕಾಲ ಉಳಿಯಬೇಕೆಂಬ ಉದ್ದೇಶ

ದಿಂದಲೇ ಅವರು ಈ ಬಗೆಯ ಯೋಜನೆ ಮಾಡಿರುವರು ಇದರಲ್ಲಿ ಭೇದಭಾವವೇತರದು? ಆದಿತ್ಯವರ್ಮರು ಹೆಚ್ಚಿನ ಪರಾಕ್ರಮವನ್ನು ತೋರಿಸಿ, ಇಡಿ ಕರ್ನಾಟಕ ಸಾಮ್ರಾಜ್ಯವನ್ನು ಆಳುವ ಸಾಮರ್ಥ್ಯ ವಿದ್ದ ಬಗ್ಗೆ ನಂಬಿಗೆ ಮಾಡಿಕೊಟ್ಟರೆ ಮಹಾರಾಜರು ಅವರನ್ನೇ ಯುವರಾಜರೆಂದು ತಿಳಿಯುವರು. ಮಹಾರಾಜರ ಮಕ್ಕಳಲ್ಲಿ ವಿಕ್ರಮಾದಿತ್ಯರೇ ಹೆಚ್ಚಿನ ಸತ್ವಶಾಲಿಗಳಿರುವರೆಂಬ ಮಾತು ಎಲ್ಲರ ನಿದರ್ಶನಕ್ಕೆ ಬಂದಿರುವದು. ವೃಥಾ ದುರಭಿಮಾನಕ್ಕೊಳಗಾಗುವದರಲ್ಲಿ ಲಾಭವೇನಿರುವದು? ನಾಥರೆ, ವಸ್ತುಸ್ಥಿತಿಯು ಹೇಗಿದ್ದರೂ ಅದರ ಗೊಡವೆಯು ನಮ್ಮಂತಹರಿಗೇಕೆ ಬೇಕು?''

''ಪ್ರಿಯೆ, ಹೀಗೆಂದರೇನು? ವಿಕ್ರಮಾದಿತ್ಯರೇನು ಭೀಮಪರಾಕ್ರಮಿಗಳಿರುವದೂ ಇಷ್ಟರಲ್ಲಿಯೇ ಇರುವದು. ಪಟ್ಟಬಾಧ್ಯರಾದ ಆದಿತ್ಯವರ್ಮರಿಗೆ ಸಹಾಯು ಮಾಡಿ ರಾಜ್ಯದ ದೊಡ್ಡಿಸ್ತಿಕೆಯನ್ನು ಕಾಯಲಿಕ್ಕೆ ಅವರಿಗೆ ಯಾರು ಬೇಡವೆನ್ನುವರು? ಆದಿತ್ಯವರ್ಮ-ಚಂದ್ರಾದಿತ್ಯರಂತೂ ವಿಕ್ರಮಾದಿತ್ಯರನ್ನು ನಾಶಗೊಳಿಸಿ, ಸಾಮ್ರಾಜ್ಯವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಸಾಹಸ ನಡೆಯಿಸಿರುವರು. ಅವರ ಕಾರ್ಯದಲ್ಲಿ ನೆರವಾದರೆ, ಒಂದು ಪ್ರಾಂತದ ಮಂಡಲೇಶ್ವರನನ್ನಾಗಿ ಮಾಡುವೆವೆಂದು ಅವರು ನನಗೆ ಅಭಿವಚನವನ್ನಿತ್ತಿರುವರು. ಪ್ರಾಣೇಶ್ವರಿ, ಈ ಕಾರಸ್ಥಾನಕ್ಕಾಗಿ ನಾನು ರೇವತಿ ದ್ವೀಪಕ್ಕೆ ಹೋಗಬೇಕಾಗಿರುವದು ಸರದಾರ-ಸೇನಾಪತಿಯಾಗಿ ದುಃಖಪಡುವದಕ್ಕಿಂತಲೂ, ರಾಜನಾಗುವದು ಶ್ರೇಯಸ್ಕರವಲ್ಲವೆ? ರೇವತಿ, ನೀನು ಸ್ವಲ್ಪ ದಿವಸಗಳಲ್ಲಿ ರಾಣೀಪದವನ್ನು ಹೊಂದಿ ವಿರಾಜಿಸುವೆ? ಇದಕ್ಕಿಂತಲೂ ಮಹದ್ಭಾಗ್ಯವು ಮತ್ತಾವದಿರುವದು? ನನ್ನ ಪೂರ್ವಜರು ಇಲ್ಲಿಯ ವರೆಗೆ ಕರ್ನಾಟಕ ಸಾಮ್ರಾಜ್ಯದ ಸೇವೆಯನ್ನು ಮಾಡಿದ್ದರೂ ಅವರಿಂದ ಯಾವ ಮಹತ್ಕಾರ್ಯವಾಗಿರುವದು? ಅವರಿಂದ ಆಗದಂತಹ ಕೃತಿಯನ್ನು ಮಾಡಿ ನಾನು ರಾಜಪದವನ್ನು ಸಂಪಾದಿಸುವೆನು. ರೇವತಿರಾಣಿಯೆಂಬ ಗೌರವದ ಅಭಿ

ಧಾನದಿಂದ ಮೆರೆಯುವ ಸುವರ್ಣಸಂಧಿಯು ನಿನಗೆ ಕ್ಷಿಪ್ರದಲ್ಲಿಯೇ ಲಭಿಸುವದು.''

"ಬೇಡ! ನನಗೆ ಆ ರಾಜ್ಞೀಪದವು ಬೇಡ. ಗೃಹಕಲಹದ ಬೇಗೆಯಲ್ಲಿ ದೊರೆಯತಕ್ಕಂತಹ ಅಧೋಗತಿ ಸಾಧಕವಾದ ಅರಸೊತ್ತಿಗೆಯ ಅರಸಿಯಾಗುವದು ನನಗೆ ಬೇಡ" ಎಂದು ರೇವತಿಯು ನುಡಿದು, ಕ್ಲೇಶದಿಂದ:— "ನಾಥರೆ, ಹೊತ್ತುತೊಡಗಿರುವ ಗೃಹಕಲಹದ ಬೇಗೆಯಿಂದಲೇ ನೀವು ಶೈತ್ಯನಿವಾರಣ ಮಾಡಿಕೊಳ್ಳಬೇಕೆಂದು ದೀರ್ಘಪ್ರಯತ್ನ ನಡೆಯಿಸಿರುವಿರೆಂದಂತಾಯಿತು!"



## ಮನಸ್ಸಿನ ನಿರ್ಧಾರ.

ಸತ್ಯಾಶ್ರಯ ಪುಲಿಕೇಶಿಯು ಅಜಂತೆಯ ನೆರೆಯಲ್ಲಿ ಸಂಚರಿಸುತ್ತಿರುವಾಗ ಅವನ ತಮ್ಮನೂ ವೆಂಗಿಯ ಮಂಡಲೇಶ್ವರನೂ ಆದ ವಿಷ್ಣುವರ್ಧನನು ರಾಜಾಜ್ಞೆಯನ್ನು ಲೆಕ್ಕಿಸದೆ ಸ್ವತಂತ್ರನಾಗಲಿಕ್ಕೆ ಹವಣಿಸತೊಡಗಿರುವನೆಂದೂ, ಕಂಚಿಯ ಪಲ್ಲವರು ಕೊಬ್ಬೇರಿದವರಾಗಿ ಚಾಲುಕ್ಯ ರಾಜ್ಯವನ್ನೊಳನುಗ್ಗಲಿಕ್ಕೆ ಜೋಡಣೆಯನ್ನು ಮಾಡತೊಡಗಿರುವರೆಂದೂ ಸುದ್ದಿಯು ಬಂತು. ಕೂಡಲೆ ಅವನು ದಂಡಯಾತ್ರೆಯನ್ನು ಮುಗಿಸಿಕೊಂಡು ರಾಜಧಾನಿಗೆ ಬಂದನು. ವಿಷ್ಣುವರ್ಧನನನ್ನು ದಾರಿಗೆ ತಂದ ಬಳಿಕ ಪಲ್ಲವರ ಮೇಲೆ ದಂಡೆತ್ತಿ ಹೋಗಬೇಕೆಂದು ಅವನ ಮನಸ್ಸಾಯಿತು. ಅವನನ್ನು ಹೇಗೆ ಹಾದಿಗೆ ತರಬೇಕೆಂದು ಅವನು ಬಹು ವಿಧವಾಗಿ ಯೋಚಿಸಿದನು. ಬಂಧುವಾತ್ಸಲ್ಯದಿಂದಲೂ ಸೌಹಾರ್ದ್ಯದಿಂದಲೂ ಒಂದು ಪ್ರಾಂತವನ್ನು ಅವನ ವಶಕ್ಕೆ ಕೊಟ್ಟಿದ್ದರೂ ವಿಷ್ಣುವರ್ಧನನು ತನ್ನ ರಾಜ್ಯವನ್ನು ಕರ್ನಾಟಕ ಸಾಮ್ರಾಜ್ಯದಿಂದ ಒಡೆದುಕೊಳ್ಳಲೆತ್ನಿಸಿದ್ದು ಮುಖ್ಯ ಅಮಾತ್ಯನಾದ ವೀರಸೇನನಿಗೆ ಸರಿಯಾಗಿ ತೋರಲಿಲ್ಲ. 'ಶಠಂ ಪ್ರತಿ ಶಾಠ್ಯಂ' ಎಂಬಂತೆ ವಿಷ್ಣುವರ್ಧನನಿಗೆ ಯೋಗ್ಯ ಶಾಸನವನ್ನು ವಿಧಿಸಿದ ಹೊರತು ಸಾಮ್ರಾಜ್ಯದ ಪಾಡು ಒಳಿತಾಗುವದಿಲ್ಲವೆಂದು ಅವನು ಅಭಿಪ್ರಾಯ

ಪಟ್ಟನು. ಅವನ ಈ ಮತವು ಮಹಾನುಭಾವನಾದ ಪುಲಿಕೇಶಿಗೆ ಸರಿಯಾಗಿ ಕಾಣಲಿಲ್ಲ. ದಂಡೋಪಾಯದಿಂದ ಜನಕ್ಷೋಭೆಗೊಳಗಾಗುವದಕ್ಕಿಂತ ಸಾಮೋಪಾಯವನ್ನು ಕೈಕೊಳ್ಳುವದೇ ಮೇಲೆಂಬ ತತ್ವದವನು ಅವನಾಗಿದ್ದುದರಿಂದ ಒಳ್ಳೆಯ ಮಾತಿನಿಂದಲೇ ವಿಷ್ಣುವರ್ಧನನನ್ನು ಹಾದಿಗೆ ತರಬೇಕೆಂದು ಹವಣಿಸತೊಡಗಿದನು. "ದಕ್ಷಿಣಾಪಥವೆಲ್ಲ ಚಾಲುಕ್ಯ ಸಾಮ್ರಾಜ್ಯಕ್ಕೆ ಒಳಗಾಗಿರುವದು. ಅದರೊಳಗಿನ ಒಂದು ನಾಡಾದರೂ ಒಡೆದು ಹೋದರೆ ಕರ್ನಾಟಕದ ಗೌರವಕ್ಕೆ ಭಂಗ ಬರುವದು. ಕರ್ನಾಟಕ ಸಾಮ್ರಾಜ್ಯವನ್ನು ಚೂರುಚೂರಾಗಿ ಮಾಡಿದರೆ ಸಂಘಟನ ಶಕ್ತಿಯಿಂದ ಬಲಗುಂದಿದ ನಾಡು ಮೇಲೆ ಉತ್ತರಾಪಥದವರ ದಾಳಿಯಾಗದಿರಲಾರದು 'ಸಂಘೇಶಕ್ತಿಃ ಕಲೌಯುಗೇ' ಎಂಬಂತೆ ನೀವೆಲ್ಲ ಬಂಧುಬಾಂಧವರೂ, ಮಂಡಲೇಶ್ವರರೂ ಐಕ್ಯದಿಂದ ನಡೆದರೆ ಕರ್ನಾಟಕ ಸಾಮ್ರಾಜ್ಯವು ಚಿರಂತನವಾಗಿ ಅಜಿಂಕ್ಯವಾಗುವದೆಂಬದರಲ್ಲಿ ಸಂದೇಹವಿಲ್ಲ. ಅಲ್ಪ ಸ್ವಾರ್ಥಕ್ಕೊಳಗಾಗಿ ರಾಷ್ಟ್ರದ ಹಾನಿಮಾಡಲುದ್ಯುಕ್ತರಾಗಬಾರದು" ಎಂಬ ಆಶಯದ ಪತ್ರವನ್ನು ಪುಲಿಕೇಶಿಯು ವಿಷ್ಣುವರ್ಧನನ ಕಡೆಗೆ ಕಳುಹಿಸಿ ಕೊಟ್ಟನು.

ವಿಷ್ಣುವರ್ಧನನು ಸ್ವತಂತ್ರನಾಗುವದಕ್ಕಾಗಿ ದೀರ್ಘಸಾಹಸ ನಡೆಯಿಸಿದ್ದನು. ಪೂರ್ವಚಾಲುಕ್ಯ ರಾಜ್ಯವೆಂದು ತನ್ನ ವೆಂಗಿಯ ಪ್ರಾಂತವನ್ನು ಕರ್ನಾಟಕ ಸಾಮ್ರಾಜ್ಯದಿಂದ ಬೇರೆಯಾಗಿ ಮಾಡಿಕೊಂಡು ಆಳಬೇಕೆಂದು ಅವನು ಯೋಚಿಸಿಕೊಂಡಿದ್ದನು. ಅವನು ಇತ್ತೀಚೆಗೆ ವಾತಾಪಿಪುರದ ಸಮ್ರಾಟನಿಗೆ ಕಾಣಿಕೆಯ ಹಣವನ್ನು ತಲುಪಿಸಿದ್ದಿಲ್ಲ. ಯಾವ ಪ್ರಕಾರದಿಂದಲಾದರೂ ತನ್ನ ಮನಸ್ಸಿನ ನಿರ್ಧಾರವನ್ನು ಬೇರೆ ಮಾಡಬಾರದೆಂದು ಅವನು ಗೊತ್ತು ಮಾಡಿಕೊಂಡಿದ್ದನು ಅಷ್ಟರಲ್ಲಿ ಪುಲಿಕೇಶಿಯ ಕಡೆಯಿಂದ ದೂತನು ಬಂದು ಅವನಿಗೆ ರಾಜಾಜ್ಞೆಯ ಪತ್ರವನ್ನಿತ್ತನು ವಿಷ್ಣುವರ್ಧನನು ಆ ಪತ್ರವನ್ನೋದಿ ಸಂತಪ್ತನಾದನು. ತನ್ನನ್ನು ಸ್ಥಿರವಾಗಿ ಮಾಂಡ

ಲಿಕನನ್ನಾಗಿ ಮಾಡಿಕೊಳ್ಳಬೇಕೆಂದು ತನ್ನ ಅಗ್ರಜನು ದುರಾಕಾಂಕ್ಷೆಯನ್ನು ತಳೆದು, ಹೀಗೆ ಸವಿನಯದ ಪತ್ರವನ್ನು ಬರೆದಿರುವನೆಂದೂ, ಅವನ ಹೃದಯವು ಸ್ವಾರ್ಥವಿಷಪೂರಿತವಿರುವದೆಂದೂ ವಿಷ್ಣುವರ್ಧನನ ಗ್ರಹಿಕೆಯಾಯಿತು. ಕಡೆಗೆ ಅವನು ತಾನು ಸ್ವತಂತ್ರನಾಗಬೇಕೆಂಬ ಧ್ಯೇಯದಿಂದ ಚ್ಯುತನಾಗಬಾರದೆಂದು ನಿಶ್ಚಯಿಸಿಕೊಂಡು, ಪುಲಿಕೇಶಿಗೆ ಅದೇ ಆಶಯದ ಪತ್ರವನ್ನು ಬರೆದು ಕಳುಹಿದನು.

ತನ್ನ ಬಂಧುವಿನ ಈ ಅದೂರ ದೃಷ್ಟಿಯ ಆಚರಣೆಯಿಂದ ಪುಲಿಕೇಶಿಯು ಬಹಳವಾಗಿ ನೊಂದುಕೊಂಡನು. ಅವನು ಶತ್ರುಗಳ ವಿಷಯದಲ್ಲಿ ಎಷ್ಟು ಕಠೋರಕರ್ಮಿಯಾಗಿದ್ದನೋ, ತನ್ನ ಬಂಧುಗಳಲ್ಲಿ ಅಷ್ಟೇ ಮೃದುವಾಗಿದ್ದನು. ಶತ್ರುಗಳ ವಿಷಯದಲ್ಲಿ ವಜ್ರಾದಪಿ ಕಠೋರಾಣಿ' ಮತ್ತು ಬಂಧು-ಬಾಂಧವರ ವಿಷಯದಲ್ಲಿ 'ಮೃದೂನಿ ಕುಸುಮಾದಪಿ' ಎಂಬಂತೆ, ಅವನ ಮನಸ್ಸಿನ ಸ್ಥಿತಿಯಿತ್ತು. ನಿಜವಾಗಿ ವಿಚಾರಿಸಿದರೆ ವಿಷ್ಣುವರ್ಧನನು ಪುಲಿಕೇಶಿಯ ಪಾಶಂಗಕ್ಕೆ ಹತ್ತುವಂತಹನಿರಲಿಲ್ಲ ಹೀಗಿದ್ದರೂ ಸಹೋದರನ ಮೇಲೆ ದಂಡೆತ್ತಿ ಹೋಗುವದಕ್ಕೆ ಸದಸದ್ವಿವೇಕವಾದ ಅವನ ಮನಸ್ಸು ಹಿಂಜರಿಯತೊಡಗಿತ್ತು. ಅವನ ಉದ್ಧಾಮತನಕ್ಕೆ ಉದಾಸೀನತೆಯನ್ನು ವ್ಯಕ್ತಪಡಿಸಿದರೆ, ಕರ್ನಾಟಕ ಸಾಮ್ರಾಜ್ಯದಲ್ಲಿ ಪಂಗಡಗಳಾಗುವವೆಂಬದು ಅವನಿಗೆ ಗೊತ್ತಿದ್ದರಿಂದ ತಟಸ್ಥವೃತ್ತಿಯನ್ನು ಧರಿಸುವಂತಿದ್ದಿಲ್ಲ; ದಂಡೋಪಾಯವನ್ನು ಕೈಕೊಳ್ಳಬೇಕೆಂದರೆ, ಭ್ರಾತೃವಾತ್ಸಲ್ಯವು ಅಡ್ಡ ಬರುತ್ತಿತ್ತು ಈ ಪ್ರಕಾರದ ಗೊಂದಲದಲ್ಲಿ ಸಿಲುಕಿದ ಪುಲಿಕೇಶಿಯು ಕಿಂಕರ್ತವ್ಯಮೂಢನಾದನು.

ಸಾಮೋಪಾಯದಿಂದಲೇ ವಿಷ್ಣುವರ್ಧನನನ್ನು ವಶಪಡಿಸಿಕೊಳ್ಳಬೇಕೆಂದು ಪುಲಿಕೇಶಿಯು ಗೊತ್ತು ಮಾಡಿಕೊಂಡಿದ್ದನು. ಅವನು ಮೇಲಿಂದ ಮೇಲೆ ವಿನಯದಿಂದಲೂ ಪ್ರೇಮದಿಂದಲೂ ವಿಷ್ಣುವರ್ಧನನಿಗೆ ಪತ್ರ ಬರೆಯತೊಡಗಿದನು. ದೂತರು ವಾತಾಪಿಪುರದಿಂದ ವೆಂಗಿಯ ವರೆಗೂ, ವೆಂಗಿಯಿಂದ ವಾತಾಪಿಪುರದ ವರೆಗೂ ಅನೇಕ

ಬಾರಿ ಎಡತಾಕಿದರು ಕಡೆಗೆ ಪುಲಿಕೇಶಿಯು ತನ್ನ ಸಹೋದರನ ಮನಸ್ಸನ್ನು ಎಳೆದುಕೊಂಡನು ವಿಷ್ಣುವರ್ಧನನು ಚಾಲುಕ್ಯಸಮ್ರಾಟನ ಮಾಂಡಲಿಕನಾಗಿರುವದಕ್ಕೆ ಸ್ವಸಂತೋಷದಿಂದ ಒಪ್ಪಿಕೊಂಡನು.

ಅನಂತರದಲ್ಲಿ ಪುಲಿಕೇಶಿಯು ಪಲ್ಲವರ ಮೇಲೆ ದಂಡೆತ್ತಿ ಹೊರಡುವ ಸೌರಣೆಯಲ್ಲಿ ತೊಡಗಿದನು ಪ್ರತಾಪವರ್ಮನು ವಯಾತೀತನಾದದ್ದರಿಂದ, ಈ ಬಾರಿಯು ದಂಡಯಾತ್ರೆಗೆ ಶಾಂತಿವರ್ಮನನ್ನು ತೆಗೆದುಕೊಂಡು ಹೋಗಬೇಕೆಂದು ಅವನು ನಿರ್ಧರಿಸಿಕೊಂಡಿದ್ದನು. ಶಾಂತಿವರ್ಮನನ್ನು ಬಳಿಯಲ್ಲಿ ಕರೆದುಕೊಂಡು ಹೋಗುವದರಲ್ಲಿ ಮತ್ತೊಂದು ಉದ್ದೇಶವಿತ್ತು. ಅವನು ಕರ್ತವ್ಯಹೀನನಾದುದರಿಂದ ಕೆಲಸದಲ್ಲಿ ತೊಡಗಿಸಿ ಕಾರ್ಯಮಹತ್ವವನ್ನು ತೋರಿಸಬೇಕೆಂದು ಪುಲಿಕೇಶಿಯ ಮನೀಷೆಯಿತ್ತು; ಆದ್ದರಿಂದ ಅವನಿಗೆ ತಿಳಿಸಿ ಹೇಳಿ, ಸಮರಾಂಗಣಕ್ಕೆ ಹೊರಡಿಸಬೇಕೆಂದು ಪುಲಿಕೇಶಿಯು ಅವನನ್ನು ಅರಮನೆಗೆ ಕರೆಯಿಸಿದನು.

"ಶಾಂತಿವರ್ಮರೆ, ನಿಮ್ಮ ತಂದೆಯವರಾದ ಪ್ರತಾಪವರ್ಮರು ಉತ್ತರವಯಸ್ಕರಾಗಿರುವರು. ಹಿಂದಿನಂತೆ ಅವರಿಂದ ಕೆಲಸವಾಗುತ್ತಿರುವದಿಲ್ಲ. ಇನ್ನು ಮೇಲೆ ಇವರನ್ನು ಸೇವಾನಿವೃತ್ತರನ್ನು ಮಾಡಿ ಮುಖ್ಯ ಸೇನಾಪತಿಯ ವಸ್ತ್ರಗಳನ್ನು ಕೊಡಬೇಕೆಂದು ಹಿಂದೆಯೇ ಒಮ್ಮೆ ನಿಮಗೆ ತಿಳಿಸಿದ್ದೆನಷ್ಟೇ; ಈಗ ಕಂಚಿಯ ಮೇಲೆ ದಂಡೆತ್ತಿ ಹೊರಡಬೇಕಾಗಿರುವದು ಅಲ್ಲಿಯ ವಿಜಯಯಾತ್ರೆಯನ್ನು ಮುಗಿಸಿಕೊಂಡು ಬಂದೊಡನೆಯೆ ನಿಮ್ಮನ್ನು ಸೇನಾಪತಿಯ ಸ್ಥಾನದಲ್ಲಿ ನಿಯಮಿಸುವೆನು. ಮೊದಲಿನ ಸ್ವೇಚ್ಛಾವೃತ್ತಿಯೂ ಆಲಸ್ಯಭಾವವೂ ಈಗ ನಿಮ್ಮನ್ನು ತೊಲಗಿರುವವೆಂದು ನನಗೆ ತಿಳಿದು ಬಂದಿದೆ"

"ಮಹಾರಾಜರೆ, ನಿಮ್ಮ ಆಜ್ಞೆಯು ಶಿರಸಾಮಾನ್ಯವಿರುವದು; ಆದರೆ ನಾನು ನಾಳಿನ ದಿನವೇ ರೇವತಿದ್ವೀಪಕ್ಕೆ ಹೊರಡಬೇಕಾಗಿರುವದು. ಕುಮಾರ ಚಂದ್ರಾದಿತ್ಯರವರು ಅಗತ್ಯವಾಗಿ ಬರಬೇಕೆಂದು ನಿರೋಪ ಕಳುಹಿಸಿರುವರು. ಅವರ ಆಜ್ಞೆಯನ್ನು ನಿರಾಕರಿಸಿದರೆ

ಸ್ನೇಹಕ್ಕೆ ವ್ಯತ್ಯಯು ಬರುವಂತಿರುವದರಿಂದ, ನಿಮ್ಮನ್ನು ನಿರುತ್ಸಾಹಗೊಳಿಸುವ ಪ್ರಸಂಗ ಬಂದಿರುವದು."

"ರೇವತಿದ್ವೀಪದಲ್ಲಿ ಅಂಥಹ ಮಹತ್ವದ ಕೆಲಸವೇನಿರುವದು?"

"ಅವನು ಪತ್ರದಲ್ಲಿ ಹೆಚ್ಚಿನ ಸಂಗತಿಯನ್ನೇನೂ ಬರೆದಿರುವದಿಲ್ಲ. ಪತ್ರದರ್ಶನವಾದ ಕೂಡಲೆ ಹೊರಟು ಬರಬೇಕೆಂದು ಬರೆದಿರುವರು."

"ಕಂಚಿಯಿಂದ ಬಂದೊಡನೆಯೇ ಅಲ್ಲಿಗೆ ಹೋಗಿರಿ. ನಾನು ಚಂದ್ರಾದಿತ್ಯನಿಗೆ ಈ ವಿಷಯದಲ್ಲಿ ಬರೆದು ತಿಳಿಸುವೆನು."

"ಮಹಾರಾಜರೆ, ಕ್ಷಮಿಸಿರಿ. ಈ ದಂಡಯಾತ್ರೆಗೆ ಮತ್ತಾರನ್ನಾದರೂ ಕರೆದೊಯ್ಯಿರಿ ನನ್ನನ್ನೇ ಒಯ್ಯಬೇಕೆಂಬ ಆಗ್ರಹವನ್ನು ಬಿಡಬೇಕೆಂದು ಪ್ರಾರ್ಥಿಸುವೆನು"

"ನೀವು ರೇವತಿದ್ವೀಪಕ್ಕೆ ಹೋಗಿ ಅಲ್ಲಿಂದ ಬೇಗನೆ ನನ್ನನ್ನು ಕೂಡಿರಿ."

"ನಾನು ಅಲ್ಲಿ ಕೆಲವು ದಿನಗಳ ವರೆಗೆ ಇರಬೇಕಾಗುವದೆಂಬಂತೆ ತೋರುವದು."

"ಅದೇಕೆ?"

"ರಾಜ್ಯದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸುವ ಕಾರ್ಯದಲ್ಲಿ ತಮಗೆ ನೆರವಾಗಬೇಕೆಂದು ನನಗೆ ತಿಳಿಸಿರುವರು. ಹೀಗಿದ್ದ ಮೇಲೆ ನಾನು ಎಷ್ಟು ದಿನಗಳ ವರೆಗೆ ಅಲ್ಲಿರುವೆನೆಂಬದರ ನಿಯಮವಿಲ್ಲ."

"ರೇವತಿದೇವಿಯನ್ನು ಸಂಗಡ ಕರೆದುಕೊಂಡೇ ಹೋಗುವಿರೇನು?"

"ಅವಳನ್ನು ಕರೆದುಕೊಂಡು ಹೋಗುವದೇ ಯುಕ್ತವಾಗಿ ತೋರುವದು ಯಾಕಂದರೆ, ನಾನು ಅಲ್ಲಿಯೇ ಬಹಳ ದಿನಗಳ ವರೆಗೆ ವಾಸವಾಗಿರುವ ಪ್ರಸಂಗವಾದರೂ ಬರಬಹುದು"

ಶಾಂತಿವರ್ಮನು ರೇವತಿದ್ವೀಪಕ್ಕೆ ಹೋಗುವ ಕಾರಣವೇನಿರಬಹುದು? ಚಂದ್ರಾದಿತ್ಯನು ಇಷ್ಟು ಅವಸರದಿಂದ ಅವನನ್ನು ಕರೆ

ಯಿಸಿಕೊಂಡ ಉದ್ದೇಶವೇನಿರಬಹುದು? ಎಂದು ಪುಲಿಕೇಶಿಯು ಯೋಚಿಸತೊಡಗಿದನು ಶಾಂತಿವರ್ಮನು ಯುದ್ಧಕ್ಕೆ ಹೊರಡಲಾರದೆ ಇಲ್ಲದ ನಿಮಿತ್ತವನ್ನು ಮುಂದೆ ಮಾಡಿರಬಹುದೆಂದು ಅವನ ಭಾವನೆಯಾಯಿತು.

"ನೀವು ಹಿರಿಯರ ಕೀರ್ತಿಗೆ ಕಲಂಕವನ್ನು ತಂದಿರಿ. ಶಾಂತಿವರ್ಮರೆ, ನೀವು ತಾಯಿಯನ್ನು ವ್ಯರ್ಥವಾಗಿ ದಣಿಸಿದಿರಿ. ಶೂರ ಕ್ಷತ್ರಿಯರಲ್ಲಿ ಈ ಬಗೆಯ ಹೇಡಿತನವು ನೆಲೆಗೊಂಡದನ್ನು ನೋಡಿ, ಸಖೇದಾಶ್ಚರ್ಯವೆನಿಸುತ್ತದೆ. ವಂಶಪರಂಪರವಾಗಿ ನಡೆದು ಬಂದ ಸೇನಾಪತಿಪದವು ನಿಮ್ಮ ತಲೆಗೆ ಎರಡನೆಯವರ ವಶವಾಗುವ ಸಮಯವೊದಗಿತು"

"ಮಹಾರಾಜರೆ, ನೀವು ನನ್ನನ್ನು ಹೇಡಿಯೆಂದೂ ಕರ್ತವ್ಯಹೀನನೆಂದೂ ಭಾವಿಸಿರುವಿರಿ. ನೀವು ಹಾಗೆ ತಿಳಿದುಕೊಳ್ಳಲಿಕ್ಕೆ ಸಬಲವಾದ ಕಾರಣಗಳಿರುವವೆಂಬದೇನೋ ನಿಜವು. ನಾನು ಇಷ್ಟು ದಿವಸಗಳ ವರೆಗೆ ರಾಜಕಾರಣದಲ್ಲಿ ತಲೆ ಹಾಕದ್ದರಿಂದ, ನನ್ನ ಸ್ಥಿತಿಯು ಹೀಗಾಗಿರುವದು. ರೇವತಿದ್ವೀಪಕ್ಕೆ ಹೋಗಿ ಬಂದ ಮೇಲೆ ನಿಮ್ಮ ಹೇಳಿಕೆಯ ಮೇರೆಗೆ ಸೇನಾಧಿಪತ್ಯವನ್ನು ವಹಿಸುವೆನು."

ಶಾಂತಿವರ್ಮನ ಮಾತಿನಿಂದ ಪುಲಿಕೇಶಿಯು ಆನಂದಬಟ್ಟನು. ರಾಜನಿಷ್ಠ ದಂಡನಾಯಕನ ಪುತ್ರನ ಹೃದಯವಾದರೂ ನಿರ್ಮಲವಾದದ್ದಿರುವದೆಂದು ಅವನ ಭಾವನೆಯಾಗಿತ್ತು. ಶರ್ಕರಾಲೇಪಿತವಾದ ವಿಷದ ಗುಟಿಕೆಯಂತೆ ಆವನ ಹೃದಯದ ಸ್ಥಿತಿಯು ಇರುವದೆಂಬದನ್ನು ಪುಲಿಕೇಶಿಯು ಹೇಗೆ ತಿಳಿಯುವನು? ಕಂಚಿಯ ದಂಡಯಾತ್ರೆಯನ್ನು ಮುಗಿಸಿ ಬಂದ ಕೂಡಲೆ ಸೇನಾಪತಿಯ ವಸ್ತ್ರಗಳನ್ನು ಸ್ವೀಕರಿಸಬೇಕೆಂದು ಅವನು ಶಾಂತಿವರ್ಮನಿಗೆ ಹೇಳಿ ರೇವತಿದ್ವೀಪಕ್ಕೆ ಹೋಗುವದಕ್ಕಾಗಿ ನಿರೋಪ ಕೊಟ್ಟನು.

ಶಾಂತಿವರ್ಮನು ಅರಮನೆಯಿಂದ ಹೊರಟು ಹೋದ ಸ್ವಲ್ಪ ವೇಳೆಯ ಮೇಲೆ ರೇವತಿದೇವಿಯು ಅಲ್ಲಿಗೆ ಬಂದಳು. ವಿಜಯ

ಮಹಾದೇವಿಯು—ಚಂದ್ರಾದಿತ್ಯನ ಪತ್ನಿಯು— ರೇವತಿದ್ವೀಪಕ್ಕೆ ಹೋದಾಗಿನಿಂದ ಅವಳು ಅರಮನೆಗೆ ಹೋಗುವದನ್ನು ಕಡಿಮೆ ಮಾಡಿದ್ದಳು ವಿಜಯಾಂಬಿಕೆಯು ಅವಳನ್ನು ತನ್ನ ಮಗಳಂತೆ ನೋಡುತ್ತಿದ್ದುದರಿಂದ ಅವಳ ಈ ವರ್ತನವನ್ನು ಅಲ್ಲಗಳೆಯುತ್ತಿದ್ದಳು. ದಿನಕ್ಕೊಮ್ಮೆಯಾದರೂ ಬರಬೇಕೆಂದು ಅವಳಿಗೆ ವಿಜಯಾಂಬಿಕೆಯು ಆಗ್ರಹದಿಂದ ಹೇಳುತ್ತಿದ್ದಳು.

ಶಾಂತಿವರ್ಮನು ಹೋದ ಮೇಲೆ ಪುಲಿಕೇಶಿಯು ತನ್ನ ಓಲಗದ ಕೋಣೆಯಿಂದ ಹೊರಬಿದ್ದು, ಅಂತಃಪುರಕ್ಕೆ ಬಂದನು. ಅಲ್ಲಿ ರೇವತಿದೇವಿಯು ತನ್ನ ಪತ್ನಿಯೊಡನೆ ಮಾತನಾಡುತ್ತ ಕುಳಿತಿದ್ದಳು. ಆಗ ಅವನು:—

'ರೈವತಸೇನರೆ, ಇದೇನು ಅಕಲ್ಪಿತವಾದ ಆಗಮನವಾಗಿದೆ?'

ನಸುನಗುತ್ತ ಪುಲಿಕೇಶಿಯು ಹೀಗೆ ನುಡಿದ ಕೂಡಲೆ ರೇವತಿದೇವಿಯು ಲಜ್ಜೆಯಿಂದ ತಲೆ ಬಾಗಿಸಿದಳು. ಆಗ ಅವಳು ಹಸನ್ಮುಖಿಯಾಗಿ:—"ಮಹಾರಾಜರೆ, ವಿನೋದಕ್ಕಾಗಿ ನಿಮಗೆ ಸಾಧನವೇ ದೊರೆತಂತಾಯಿತಲ್ಲವೆ?"

"ರೇವತಿಯು ಈಗ ನಮ್ಮ ಮೇಲೆ ಕ್ಷೋಭೆಗೊಂಡಿರುವಳು. ಇವಳು ಬಾರದಿದ್ದರೆ, ನನ್ನ ಮನಸ್ಸು ಹಿಂದು ಬಗೆಯಾಗುವದು. ದಿನಕ್ಕೊಮ್ಮೆಯಾದರೂ ಬರುವದಕ್ಕೆ ತಿಳಿಸಿದ್ದರೂ ನನ್ನ ಮಾತಿನ ಕಡೆಗೆ ದುರ್ಲಕ್ಷಿಸುತ್ತಿರುವಳು" ಎಂದು ವಿಜಯಾಂಬಿಕೆಯು ತನ್ನ ಪತಿಯಾದ ಪುಲಿಕೇಶಿಯನ್ನು ಕುರಿತು ನುಡಿದು:—"ರೇವತಿ, ಶಾಂತಿವರ್ಮರು ಒಂದು ಗಳಿಗೆ ಸಹ ಅಗಲಿ ಇರಲಾರರೇನು?"

"ರೇವತಿಯೇ ಪತಿಯನ್ನಗಲಿ ಇರುವದಕ್ಕೆ ಮನಸ್ಸಿಲ್ಲದವಳಾಗಿರುವಳೆಂದು ಏಕೆ ಅನ್ನಲಾಗದು?" ಎಂದು ಗಹಗಹಿಸಿ ನಗುತ್ತ ಪುಲಿಕೇಶಿಯು ನುಡಿಯಲು, ರೇವತಿಯು ವಿಜಯಾಂಬಿಕಾದೇವಿಯವರನ್ನು ಕುರಿತು: "ಮಹಾರಾಣಿಯವರೆ, ನೀವು ನನ್ನೊಡನೆ ವಿನೋದವಾಡುವದಕ್ಕಾಗಿ ಮಹಾರಾಜರನ್ನು ಪ್ರೋತ್ಸಾಹಿಸುತ್ತಲಿರುವಿರಿ."

"ಶಾಂತಿವರ್ಮರು ರೇವತಿದ್ವೀಪಕ್ಕೆ ಹೊರಡುವವರಿರುವರಂತೆ. ಕೆಲವು ದಿನಗಳ ವರೆಗೆ ಅವರು ಹೋಗುತಲಿದ್ದರೂ ನೀನು ಅವರೊಡನೆ ಹೋಗುವದಕ್ಕಾಗಿ ಹಟ ಹಿಡಿದಿರುವಿಯಂತೆ."

"ಮಹಾರಾಜರೆ, ನಿಮಗೆ ಈ ಸಂಗತಿಯನ್ನಾರು ಹೇಳಿದರು?"

"ಪಥಿಕರು ಮಾತನಾಡುತ್ತಿದ್ದರು" ಎಂದು ಪುಲಿಕೇಶಿಯು ರೇವತಿಗೆ ಹೇಳಿ ನಗತೊಡಗಿದನು.

"ಮಹಾರಾಜರೆ, ಮಾತಾಪಿತೃಗಳನ್ನು ಬಿಟ್ಟು ತೆರಳುವದೆಂದರೆ ನನಗೆ ಮರಣಪ್ರಾಯವಾದ ವ್ಯಥೆಯಾಗತೊಡಗಿದೆ. ರೇವತಿದ್ವೀಪಕ್ಕೆ ಹೊರಡುವ ವಿಚಾರವನ್ನು ಬಿಟ್ಟು ಬಿಡುವ ಬಗ್ಗೆ ಅವರಿಗೆ ತಿಳಿಸಿ ಹೇಳಬೇಕೆಂದು ನಾನು ನಿಮಗೆ ವಿನಂತಿ ಮಾಡಿಕೊಳ್ಳುವದಕ್ಕಾಗಿ ಇಲ್ಲಿಗೆ ಬಂದಿರುವೆನು."

"ರೇವತಿ, ಶಾಂತಿವರ್ಮರು ಇದೀಗ ಇಲ್ಲಿಗೆ ಬಂದಿದ್ದರು. ಅವರು ಚಂದ್ರಾದಿತ್ಯನನ್ನು ಕಂಡು ಕೆಲ ದಿನಗಳಲ್ಲಿಯೆ ತಿರುಗಿ ಬರುವೆನೆಂದು ಹೇಳಿ ನನ್ನಾಜ್ಞೆಯನ್ನು ಹೊಂದಿದರು. ಇನ್ನೊಂದು ಸಂತೋಷದ ಸಂಗತಿಯೇನಂದರೆ: "ರೇವತಿದ್ವೀಪದಿಂದ ಬಂದ ಕೂಡಲೆ ಸೇನಾಪತಿಯ ಕೆಲಸವನ್ನು ಕೈಕೊಳ್ಳುವೆನೆಂದು ಹೇಳಿರುವರು."

"ಅವರು ರೇವತಿದ್ವೀಪದಿಂದ ಬಂದರಷ್ಟೆ ಸೇನಾಧಿಪತ್ಯವನ್ನು ಕೈಕೊಳ್ಳುವದು?"

"ಅದೇಕೆ?"

"ಇಲ್ಲಿದ್ದರೆ ಮೇಲಿಂದ ಮೇಲೆ ಯುದ್ಧಕಾರ್ಯದಲ್ಲಿ ತೊಡಗುವ ಪ್ರಸಂಗವೊದಗುವದೆಂದು ತಿಳಿದು, ಅವರು ಇಲ್ಲಿಂದ ಪ್ರಸ್ಥಾನ ಕಟ್ಟುವ ಸಾಹಸವನ್ನು ಮಾಡತೊಡಗಿರುವರು. ರೇವತಿದ್ವೀಪದಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತ ಕಾಲಕಳೆಯಬೇಕೆಂದು ಅವರ ಇಚ್ಛೆಯಿದ್ದಂತೆ ತೋರುವದು. ಇದರ ಹೊರತು ಮತ್ತಾವ ಉದ್ದೇಶವಿರುವದೆಂಬದನ್ನು ನಿಶ್ಚಯಪೂರ್ವಕವಾಗಿ ಹೇಳುವದಕ್ಕೆ ಮಾರ್ಗವಿಲ್ಲ. ಮಹಾರಾಜರೆ, ನೀವು ಅವರಿಗೆ ರೇವತಿದ್ವೀಪಕ್ಕೆ

ಹೊರಡಲು ಆಜ್ಞೆಯನ್ನು ಕೊಡಬೇಡಿರಿ.”

“ಶಾಂತಿವರ್ಮರು ಈಗಾಗಲೆ ನನ್ನ ಅಪ್ಪಣೆಯನ್ನು ಪಡೆದು ಹೋಗಿರುವರು. ಅವರು ಹೋಗುವದರಿಂದ ನಮ್ಮ ಕಾರ್ಯದಲ್ಲಿ ಅಡ್ಡಿಯಾಗುವದೂ ಅಷ್ಟರಲ್ಲಿಯೆ ಇರುವದು ನಿನ್ನನ್ನಾದರೂ ಸಂಗಡ ಕರೆದುಕೊಂಡು ಹೋಗುವನೆಂಬಂತೆ ತೋರುವದು.”

“ಮಹಾರಾಜರೆ, ನಾನು ಅವರ ಜೊತೆಯಲ್ಲಿ ಹೊರಡುವದೇ ಇಲ್ಲ. ಅವರು ರೇವತಿದ್ವೀಪಕ್ಕೆ ಹೊರಡುವದರ ಉದ್ದೇಶವು ನೀಚ ತರಹದ್ದಿರಬಹುದೆಂದು ನನ್ನ ಮನೋದೇವತೆಯು ಹೇಳುತ್ತಿರುವದು. ಹೀಗಿರಲು, ನಾನು ಅವರೊಡನೆ ಹೋಗುವದು ಹೇಗೆ? ನಾನು ಇಲ್ಲಿದ್ದರೇನೇ ಅವರು ಬೇಗನೆ ತಿರುಗಿ ಬರುವದಾಗಿದೆ.”

“ಹಿಳ್ಳಿಯ ಪರಿಪಕ್ವ ವಿಚಾರಗಳಿವು!” ಎಂದು ಪುಲಿಕೇಶಿಯು ನುಡಿದು ರೇವತಿಯನ್ನು ಕುರಿತು: “ಅವರು ರೇವತಿದ್ವೀಪಕ್ಕೆ ಪಯಣ ಬೆಳೆಯಿಸುವದರಲ್ಲಿ ಯಾವ ಬಗೆಯ ದುರುದ್ದೇಶವಿರಬಹುದು?”

“ಕಾರಣವನ್ನು ನಿಶ್ಚಿತವಾಗಿ ತಿಳಿಸಲಿಕ್ಕೆ ಯೋಗ್ಯ ಪ್ರಮಾಣಗಳು ದೊರೆತಿಲ್ಲ. ಅವರ ಉದ್ದೇಶವು ಕ್ರಮೇಣ ತಿಳಿಯಬಹುದು”

ತನ್ನ ಪತಿಯ ಕ್ಷುದ್ರ ವಿಚಾರಗಳು ಗೊತ್ತಿದ್ದರೂ, ಆ ಸಂಗತಿಯನ್ನು ಈಗಾಗಲೆ ಪುಲಿಕೇಶಿಯ ಮುಂದೆ ಹೇಳಲಾರದವಳಾಗಿದ್ದಳು. ಹೇಗಾದರೂ ಯುಕ್ತಿಸಿ ಅವನನ್ನು ರೇವತಿದ್ವೀಪಕ್ಕೆ ಹೊರಡದಂತೆ ಮಾಡುವದೇ ಅವಳ ಮಾನಸವಿದ್ದಿತು ಅವನು ಈಗಾಗಲೆ ಅರಸನ ಆಜ್ಞೆಯನ್ನು ಹೊಂದಿ ಹೋದನೆಂಬ ಸಂಗತಿಯನ್ನು ಕೇಳಿ, ಅವಳ ಮನಸ್ಸು ಮತ್ತಿಷ್ಟು ಕ್ಲೇಶಗೊಂಡಿತು. ಆಗ ಅವಳು ಪುಲಿಕೇಶಿಯನ್ನು ಕುರಿತು:—

“ಮಹಾರಾಜರೆ, ನಾನೆಂತೂ ಮಾತೃಭೂಮಿಯಾದ ವಾತಾಪಿಪುರವನ್ನು ಬಿಡುವದಿಲ್ಲ ನೀವು ಅವರನ್ನು ಕರೆಯಿಸಿ ಉಪದೇಶಿಸಿರಿ”

“ರೇವತಿ, ನೀನು ಪತಿಯೊಡನೆ ಹೊರಡುವದಿಲ್ಲವೆ?”

“ಅಲ್ಲಿಗೆ ಹೋಗಬಾರದೆಂದೇ ಮನಸ್ಸಿನ ನಿರ್ಧಾರವಿರುವದು.”

## ಕಂಚಿಯ ಕದನ.

ಕಂಚಿಯ ಪಲ್ಲವರ ಅರಸನಾದ ಮಹೇಂದ್ರವರ್ಮನು ಸ್ವತಂತ್ರ ನಾಗಬೇಕೆಂದು ಪ್ರಯತ್ನವನ್ನು ನಡೆಯಿಸಿದ್ದನಷ್ಟೇ; ಈ ಬಗೆಯ ಉದ್ದಾಮವೃತ್ತಿಯನ್ನು ತ್ಯಜಿಸಿ, ಹಿಪ್ಪಂದವಾದ ಮೇರೆಗೆ ಎಂದಿನಂತೆ ಕರ್ನಾಟಕ ಸಾಮ್ರಾಜ್ಯದ ಮಂಡಲೇಶ್ವರನಾಗಿ ನಿಷ್ಠೆಯಿಂದ ನಡೆದುಕೊಳ್ಳಬೇಕೆಂದು ಪುಲಿಕೇಶಿಯು ಅವನಿಗೆ ಹೇಳಿ ಕಳುಹಿಸಿದನು. ಈ ಸಾಮೋಪಾಯದಿಂದ ಮಹೇಂದ್ರವರ್ಮನು ಹಾದಿಗೆ ಬಾರದ್ದರಿಂದ, ಪುಲಿಕೇಶಿಯು ದಂಡೆತ್ತಿ ಹೊರಡುವದಕ್ಕಾಗಿ ಸಿದ್ಧತೆಯಲ್ಲಿ ತೊಡಗಿದನು.

ಪುಲಿಕೇಶಿಯು ಯುದ್ಧದ ಸಾಮಗ್ರಿಗಳನ್ನೊದಗಿಸಿಕೊಂಡು, ಕಾಳಗದಲ್ಲಿ ನುರಿತ ದಂಡಾಳುಗಳನ್ನು ಸಜ್ಜುಮಾಡಿಕೊಂಡು ಪಲ್ಲವರ ಮೇಲೆ ದಂಡೆತ್ತಿ ಹೊರಟನು. ಅವನೊಡನ ಪ್ರಸಿದ್ಧ ಪ್ರತಾಪಶಾಲಿಯಾದ ಪ್ರತಾಪವರ್ಮನೂ, ನಾಮಾಂಕಿತ ವಿಕ್ರಮಶಾಲಿಯಾದ ವಿಕ್ರಮಾದಿತ್ಯನೂ ಹೊರಟಿದ್ದರು. ಪ್ರತಾಪವರ್ಮನು ಈಗ ಉತ್ತರ ವಯಸ್ಕನಾಗಿದ್ದರೂ ಅವನು ಭೀಷ್ಮ-ದ್ರೋಣಾದಿಗಳನ್ನು ನೆನಪು ಮಾಡಿಕೊಡುತ್ತಿದ್ದನು. ಈ ಕನ್ನಡಕಲಿಯ ಅಪ್ರತಿಮ ರಣೋತ್ಸಾಹ, ಅನುಪಮಧೈರ್ಯ, ವಿಲಕ್ಷಣಸಾಹಸ ಮೊದಲಾದವುಗಳನ್ನು ನೋಡಿದರೆ, ಆಗಿನ ಕಾಲದ ತರುಣವರ್ಗವು ಸಹ ಬೆರಳು ಕಚ್ಚುತ್ತಿತ್ತು!

ನಾಮಾಂಕಿತ ಸೇನಾಪತಿಯಾದ ಪ್ರತಾಪವರ್ಮನೊಡನೆ ಹೇರಳವಾದ ಸೈನ್ಯವನ್ನು ತೆಗೆದುಕೊಂಡು ಪುಲಿಕೇಶಿಯು ದಂಡೆತ್ತಿ ಹೊರಟಿರುವನೆಂಬ ವಾರ್ತೆಯನ್ನು ಕೇಳಿದ ಕೂಡಲೆ, ಕಂಚಿಯ ಪಲ್ಲವ ಅರಸನಾದ ಮಹೇಂದ್ರವರ್ಮನು ಯುವರಾಜನಾದ ನರಸಿಂಹವರ್ಮನೊಂದಿಗೆ ಶತ್ರುಗಳಿಗೆ ಎದುರಾಗುವದಕ್ಕಾಗಿ ಹೇರಳ ಸೇನೆಯೊಡನೆ ಹೊರಟನು. ಪುಲಿಕೇಶಿಯ ಸೈನ್ಯವು ತನ್ನ ರಾಜ್ಯವನ್ನು ಹೊಕ್ಕು ಹಾಳುಮಾಡಬಾರದೆಂಬ ಉದ್ದೇಶದಿಂದಲೇ ಅವನು ಆ ಸೈನ್ಯವನ್ನು ಹೊರಗಿಂದ ಹೊರಗೇ ಓಡಿಸಬೇಕೆಂದು ನಿಶ್ಚಯಿಸಿ

ಕೊಂಡಿದ್ದನು ಚಾಲುಕ್ಯ-ಪಲ್ಲವ ನಾಡುಗಳ ಮೇರೆಯ ಮೇಲೆ ಎರಡೂ ದಂಡುಗಳು ಕೂಡಿದವು ಆಗ ಸಂಧ್ಯಾಕಾಲವಾದದ್ದರಿಂದ ಮಾರನೆಯ ದಿವಸ ಯುದ್ಧವನ್ನು ಪ್ರಾರಂಭಿಸಬೇಕೆಂದು ಎರಡೂ ನಿಟ್ಟಿನವರು ನಿರ್ಧರಿಸಿಕೊಂಡರು.

ಭಗವಾನ್ ದಿವಾಕರನು ಪೂರ್ವಾಚಲವನ್ನೇರಿ ಸೃಷ್ಟಿಯೊಳಗಿನ ಎಲ್ಲ ಪದಾರ್ಥಗಳ ಮೇಲೆ ತನ್ನ ಅನಂತ ಕಿರಣಗಳನ್ನು ಕೆಡಹಿದ್ದನು ಸಾಕಾರ ಪರಮಾತ್ಮನಾದ ಸಹಸ್ರರಶ್ಮಿಯ ಉದಯದಿಂದ ಸೃಷ್ಟಿಯೊಳಗಿನ ಎಲ್ಲ ವಸ್ತುಗಳೂ, ವನಸ್ಪತಿಗಳೂ, ಪ್ರಾಣಿಕೋಟಿಯೂ ನೂತನ ತೇಜವನ್ನು ಹೊಂದಿದ್ದವು ಪುಷ್ಪ-ಲತೆಗಳು ಸುಹಾಸ್ಯವದನದಿಂದಲೂ, ಫಲ-ವೃಕ್ಷಗಳು ನಮ್ರಭಾವದಿಂದಲೂ, ಪ್ರಾಣಿಕೋಟಿಯು ಭಕ್ತಿಯಿಂದಲೂ, ಇತರ ವಸ್ತುಗಳು ಪ್ರೇಮದಿಂದಲೂ ಪ್ರಭಾಕರನ ಸ್ವಾಗತ ಮಾಡುವಂತೆ ಕಂಗೊಳಿಸತೊಡಗಿದ್ದವು. ವಿಶ್ವರೂಪಿಯಾದ ರಾತ್ರಿಯು ಆಕಾಶರೂಪಿಯಾದ ಆಚ್ಛಾದನವನ್ನು ಬರಿದಾಗಿ ಮಾಡಿ ಬರಲಾರಂಭಿಸಿದ ಆ ಪರಮಾತ್ಮನನ್ನು ನೋಡಿ, ಆನಂದಯುತವಾದ ಸೃಷ್ಟಪದಾರ್ಥಗಳೂ ಜೀವರಾಶಿಗಳೂ ಕಾಂತಿಯನ್ನು ಹೊಂದಿದ್ದವು. ಚಾಲುಕ್ಯರ ಸೈನ್ಯವೂ, ಪಲ್ಲವರ ಸೈನ್ಯವೂ ಉದಯೋನ್ಮುಖ ಮಾರ್ತಾಂಡನಿಗೆ ನಮಸ್ಕಾರಗಳನ್ನರ್ಪಿಸಿ ಯುದ್ಧಕಾರ್ಯಕ್ಕಾಗಿ ಸಿದ್ಧವಾದವು.

ಪುಲಿಕೇಶಿಯು ತನ್ನ ಶಿಬಿರದಿಂದ ಸೇನೆಯನ್ನು ಹೊರಡಿಸಿ ಪಲ್ಲವರ ಮೇಲೆ ಬಿದ್ದನು. ಎರಡೂ ಸೈನ್ಯಗಳ ನಡುವೆ ತುಮುಲವಾದ ಸಂಗ್ರಾಮವು ಪ್ರಾರಂಭವಾಯಿತು ದಿವಾಕರನು ಮಧ್ಯಾಕಾಶವನ್ನು ದಾಟಿ ಹೋಗಿದ್ದರೂ ಎರಡೂ ಬಣಗಳ ರಣೋತ್ಸಾಹವು ಹಿಮ್ಮೆಟ್ಟಿರಲಿಲ್ಲ ಒಂದೇ ಹೊಡತಕ್ಕೆ ಪುಲಿಕೇಶಿಯನ್ನು ಹಣ್ಣು ಮಾಡುವೆನೆಂದು ಹೆಮ್ಮೆಗೊಂಡ ಮಹೇಂದ್ರವರ್ಮನ ಉದ್ದಾಮವೃತ್ತಿಯು ಮಾತ್ರ ನಾಶವಾಗಿತ್ತು. ಪುಲಿಕೇಶಿಯ ಹಾಗೂ ಅವನ ದಂಡಾಳುಗಳ ಯುದ್ಧಚಾಪಲ್ಯವು ಅವರ್ಣನೀಯವಿರುವದೆಂಬದು

ಅವನಿಗೆ ಮನವರಿಕೆಯಾಗಿತ್ತು. ಹೀಗಿದ್ದರೂ ತನ್ನ ಪಕ್ಷವೇ ಜಯಶಾಲಿಯಾಗುವದೆಂದು ಅವನ ಭ್ರಮೆಯಿತ್ತು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಅವನ ಭ್ರಾಮಕ ಕಲ್ಪನೆಯು ದೂರಾಗುವ ಪ್ರಸಂಗವು ಒದಗಿತು. ಸೂರ್ಯನು ಪಶ್ಚಿಮದಿಶೆಗೆ ಇಳಿಯುತ್ತ ಹೋದಂತೆ ಮಹೇಂದ್ರವರ್ಮನ ದಂಡಾಳುಗಳ ಕೊಬ್ಬು ಇಳಿಯುತ್ತ ನಡೆಯಿತು. ಪಲ್ಲವ ಸೇನೆಯು ಹಿಂಜರಿಯ ತೊಡಗಿದಂತೆ ಕನ್ನಡಿಗರು ದ್ವಿಗುಣಿತ ಉತ್ಸಾಹದಿಂದ ಕಾದತೊಡಗಿದರು. ಅವರ ಗಂಡಿ ಹೊಡತವನ್ನೂ, ಕಡು ಕಡತವನ್ನೂ ತಾಳಲಾರದೆ, ತಮಿಳ ಸೈನಿಕರು ಕಾಲಿಗೆ ಬುದ್ಧಿ ಹೇಳಿದರು. ಮಹೇಂದ್ರವರ್ಮನೂ, ಯುವರಾಜನಾದ ನರಸಿಂಹವರ್ಮನೂ ಪಲಾಯನ ಮಾಡತೊಡಗಿದ ತಮ್ಮ ಸೇನೆಯನ್ನು ತಡೆಯಲಿಕ್ಕೆ ಬಹು ವಿಧವಾಗಿ ಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೂಡಲೆ ಅವರೀರ್ವರೂ ಗಲಿತ ಧೈರ್ಯರಾಗಿ ಕಂಚಿಗಭಿಮುಖವಾಗಿ ಓಡಿ ಹೋದರು. ವೀರಪುಲಿಕೇಶಿಯು ಓಡತೊಡಗಿದ ಪಲ್ಲವಸೇನೆಯನ್ನು ಬೆನ್ನಟ್ಟಿ, ಸಂಧಿ ಸಿಕ್ಕಲ್ಲಿ ಅವರನ್ನು ಮುರಿಬಡಿಯುತ್ತ, ಕಂಚಿ ರಾಜಧಾನಿಯ ನೆರೆಯಲ್ಲಿರುವ ಪುಳ್ಳಲೂರೆಂಬ ಹಳ್ಳಿಯ ವರೆಗೆ ಹೋದನು.

ಪುಲಿಕೇಶಿಯ ಸೈನ್ಯವು ರಾಜಧಾನಿಯನ್ನು ಸಮೀಪಿಸಿದ್ದರಿಂದ ಮಹೇಂದ್ರವರ್ಮನು ಎದೆಗುಂದಿದನು. ಕನ್ನಡಿಗರು ಕಂಚಿಯನ್ನು ವಿಧ್ವಸ್ತ ಮಾಡದಿರಲಾರರೆಂದು ಅವನಿಗೆ ತಿಳಿಯಿತು. ತಮಿಳನಾಡಿನ ರಾಜಧಾನಿಯನ್ನು ಕಾಯುವದಕ್ಕಾಗಿಯೂ ಪಲ್ಲವರ ಅಭಿಮಾನವನ್ನು ರಕ್ಷಿಸುವದಕ್ಕಾಗಿಯೂ ಶಕ್ತಿಮೀರಿ ಕಾದಬೇಕೆಂದು ಅವನು ತನ್ನ ದಂಡಾಳುಗಳಿಗೆ ಉಪದೇಶಿಸಿದನು. ದೇಹದಲ್ಲಿ ಪ್ರಾಣವಿರುವ ವರೆಗೆ ಕನ್ನಡಿಗರನ್ನು ರಾಜಧಾನಿಯಲ್ಲಿ ಬರಗೊಡಬಾರದೆಂದು ಅವನು ಎಲ್ಲ ದಂಡಾಳುಗಳಿಗೂ ವಿನಂತಿ ಮಾಡಿಕೊಂಡನು. ಬೇಗನೆ ಸಾಧ್ಯವಾದಷ್ಟು ಹೊಸ ಸೇನೆಯನ್ನು ಸಿದ್ಧಪಡಿಸಿಕೊಂಡು ಬರುವದಕ್ಕಾಗಿ ಅವನು ಯುವರಾಜ ನರಸಿಂಹವರ್ಮನಿಗೆ ಹೇಳಿದ್ದನು. ಕನ್ನಡ ಸೈನಿಕರು ಸದ್ಯಕ್ಕೆ ಪುಳ್ಳಲೂರ ಬಳಿಯಲ್ಲಿ ಬೀಡು ಬಿಟ್ಟಿದ್ದು, ಬೇಗನೆ ಕಂಚಿಯ

ಮೇಲೆ ಸಾಗಿ ಬರುವರೆಂಬ ವಾರ್ತೆಯು ಅವನಿಗೆ ಗುಪ್ತಚಾರರು ಮುಖಾಂತರ ತಿಳಿಯಿತು. ಅಷ್ಟರಲ್ಲಿ ನರಸಿಂಹವರ್ಮನು ತಕ್ಕಷ್ಟು ಹೊಸ ಸೇನೆಯನ್ನು ಕೂಡಿಸಿಕೊಂಡು ಕಂಚಿಗೆ ಬಂದನು. ಕೂಡಲೆ ಮಹೇಂದ್ರವರ್ಮನು ನವ್ಯಸ್ಫೂರ್ತಿಯಿಂದ ಪುಲಿಕೇಶಿಯೊಡನೆ ಕಾದು ವದಕ್ಕಾಗಿ ರಾಜಧಾನಿಯಿಂದ ಹೊರಬಿದ್ದನು.

ಮಹೇಂದ್ರವರ್ಮನು ಅಕಸ್ಮಾತ್ತಾಗಿ ದಂಡೆತ್ತಿ ಬರಬಹು ದೆಂದು ತಿಳಿದು, ಪುಲಿಕೇಶಿಯು ತನ್ನ ದಂಡಿನ ಅತ್ಯಲ್ಪ ಭಾಗವನ್ನು ಕಂಚಿ-ಪುಳ್ಳಲೂರಿನ ನಡುವೆ ಇಟ್ಟಿದ್ದನು. ಮಹೇಂದ್ರವರ್ಮನ ಚಲನವಲನವನ್ನು ತಿಳಿದು ಕೂಡಲೆ ಶಿಬಿರಕ್ಕೆ ಸುದ್ದಿಯನ್ನು ಹಚ್ಚ ಬೇಕೆಂದು ಅವನು ಹೀಗೆ ಯೋಜನೆ ಮಾಡಿದ್ದನು. ಅವನ ಈ ಯೋಜನೆಯು ಅಲ್ಪಮಟ್ಟಿಗೆ ದುಷ್ಪರಿಣಾಮವನ್ನುಂಟು ಮಾಡಿತು. ಕಂಚಿಯಿಂದ ಹೊರಟ ಮಹೇಂದ್ರವರ್ಮನು ಅಕಸ್ಮಾತ್ತಾಗಿ ಈ ಸಣ್ಣ ದಂಡಿನ ಮೇಲೆ ಬಿದ್ದದರಿಂದ, ಪಲ್ಲವರ ಹೇರಳವಾದ ಸೇನೆಗೆ ಅದು ಈಡಾಗಲಿಲ್ಲ. ಆ ಪಥಕದ ನಾಯಕನಾದ ಕುಮಾರ ವಿಕ್ರಮಾ ದಿತ್ಯನು ತನ್ನ ಅಲ್ಪ ದಳದೊಂದಿಗೆ ಎಷ್ಟು ವಿಧವಾಗಿ ಸಾಹಸ ಮಾಡಿ ದರೂ ವ್ಯರ್ಥವಾಯಿತು. ಕಡೆಗೆ ಕನ್ನಡಿಗರು ಹತಾಶರಾಗಿ ಪುಳ್ಳ ಲೂರಲ್ಲಿದ್ದ ತಮ್ಮ ಶಿಬಿರವನ್ನು ಸೇರಬೇಕಾಯಿತು. ಈ ಅಪಜಯದ ಭೀಷಣ ವಾರ್ತೆಯನ್ನು ಕೇಳಿ ಪುಲಿಕೇಶಿಯ ತಲೆಯೇ ತಿರುಗಿತು. ಅವನು ಪಲ್ಲವರ ಇತ್ಯರ್ಥವನ್ನು ಕಂಡೇ ತೀರಬೇಕೆಂದು ದೃಢ ಸಂಕಲ್ಪ ಮಾಡಿಕೊಂಡನು.

ಮಹೇಂದ್ರವರ್ಮನು ದೊರೆತಷ್ಟು ವಿಜಯದಿಂದ ತೃಪ್ತನಾ ಗದೆ, ಪುಳ್ಳಲೂರಲ್ಲಿದ್ದ ಪುಲಿಕೇಶಿಯ ಶಿಬಿರದ ಮೇಲೆ ಬಿದ್ದು, ಅದರ ಪಾರಿಪತ್ಯ ಮಾಡಿಬಿಡಬೇಕೆಂದು ಮುಂದೆ ಸಾಗಿದನು. ಈಗ ಅವನೂ ಯುವರಾಜನಾದ ನರಸಿಂಹವರ್ಮನೂ ವಿಜಯೋತ್ಸಾಹದಿಂದ ಮೈ ಮರೆತಿದ್ದರು. ಪುಲಿಕೇಶಿಯನ್ನು ವಾತಾಪಿಪುರದ ವರೆಗೆ ಓಡಿಸಿ, ಅಪೂರ್ವವಿಜಯವನ್ನು ಸಂಪಾದಿಸಬೇಕೆಂದು ಅವರು ಮಹತ್ವಾ

ಕಾಂಕ್ಷೆಯುಳ್ಳವರಾಗಿದ್ದರು. ಈಗ ಅವರು ಕನ್ನಡಿಗರ ಹೊಡತವನ್ನೂ, ಹಿಂದಿನ ಪರಾಭವವನ್ನೂ ಸಂಪೂರ್ಣವಾಗಿ ಮರೆತಿದ್ದರು. ತಂದೆ-ಮಕ್ಕಳೀರ್ವರೂ ವೀರಾವೇಶದಿಂದ ಸಾಗಿ ಹೋಗಿ ಪುಲಿಕೇಶಿಯ ಸೈನ್ಯದ ಮೇಲೆ ಬಿದ್ದರು.

ಪುಲಿಕೇಶಿಗೆ ಅಪಜಯವೆಂದರೇನೆಂಬದು ಗೊತ್ತೇ ಇರಲಿಲ್ಲ. ತನ್ನ ದಂಡಿನ ಒಂದು ಭಾಗವಾದರೂ ಪಲ್ಲವರಿಗೆ ಸೋತು ಬಂದದ್ದರಿಂದ, ಅವನು ಬಹಳೇ ಕ್ರೋಧೋನ್ಮತ್ತನಾಗಿದ್ದನು. ಯುದ್ಧದಲ್ಲಿ ಯಾವನಾದರೂ ಸೋತು ಓಡಿ ಹೋದರೆ ಇಲ್ಲವೆ ಧೈರ್ಯಗುಂದಿ ಹಿಂಜರಿದರೆ, ಅವನನ್ನು ಹಿಡಿದು ಅವನಿಗೆ ಸ್ತ್ರೀ ವೇಷವನ್ನು ಕೊಟ್ಟು ಊರಲ್ಲಿ ಮೆರೆಯಿಸುವ ಪರಿಪಾಠವು ಚಾಲುಕ್ಯಸೇನೆಯಲ್ಲಿ ರೂಢವಾಗಿತ್ತು. ಇಂದು ವಿಕ್ರಮಾದಿತ್ಯನೇ ಅಪಜಯ ಹೊಂದಿ ಬಂದದ್ದರಿಂದ, ಅವನಿಗೂ ಅವನ ದಂಡಾಳುಗಳಿಗೂ ಇದೇ ವಿಧದ ಶಾಸನವನ್ನು ಕೊಡಬೇಕೆಂದು ಪುಲಿಕೇಶಿಯು ನಿಶ್ಚಯಿಸಿಕೊಂಡಿದ್ದರೂ, ಅವಕಾಶವು ದೊರೆಯದ್ದರಿಂದ ನಿರುಪಾಯನಾದನು. ಯಾಕಂದರೆ ಇಷ್ಟರಲ್ಲಿಯೇ ಪಲ್ಲವರು ಸಾಗಿ ಬರುವರೆಂಬ ವಾರ್ತೆಯು ತಿಳಿಯಿತು. ಆಗ ಅವನು ವಿಕ್ರಮಾದಿತ್ಯನಿಗೂ, ಅವನ ಪರಾಭೂತ ದಂಡಾಳುಗಳಿಗೂ ಮನವಿಟ್ಟು ಯುದ್ಧ ಮಾಡಬೇಕೆಂದು ಆಜ್ಞಾಪಿಸಿದನು. ವಿಕ್ರಮಾದಿತ್ಯನ ಕಡೆಗಿದ್ದ ದಂಡಾಳುಗಳು ಸ್ವಲ್ಪವಿದ್ದುದರಿಂದ ಅವರಿಗೆ ಶಾಸನವನ್ನು ವಿಧಿಸುವದಿಲ್ಲವೆಂದೂ, ಎಲ್ಲರೂ ಭಾವೀಸಂಗ್ರಾಮದಲ್ಲಿ ಹೆಚ್ಚಿನ ಸಾಹಸವನ್ನು ತೋರಿಸಿದರೆ, ಯುದ್ಧಕ್ಕೆ ಅಂಜಿ ಓಡಿ ಬಂದ ಜನರ ಅಪರಾಧವನ್ನು ಪೂರ್ಣವಾಗಿ ಕ್ಷಮಿಸುವೆನೆಂದೂ ಪುಲಿಕೇಶಿಯು ಅವರಿಗೆ ಹೇಳಿದನು.

ಪುಳ್ಳಲೂರ ಬಳಿಯಲ್ಲಿ ಪುಲಿಕೇಶಿ-ಮಹೇಂದ್ರವರ್ಮರ ನಡುವೆ ಘನಘೋರವಾದ ಸಂಗ್ರಾಮವೆಸಗಿತು. ಎರಡೂ ಕಡೆಯವರು ಒಳ್ಳೆಯ ಆವೇಶದಿಂದ ಕಾದತೊಡಗಿದ್ದರು. ಕಡೆಗೆ ಈ ನಿಕರದ ಕಾಳಗದಲ್ಲಿ ಜಯಲಕ್ಷ್ಮಿಯು ಪುಲಿಕೇಶಿಗೇ ಮಾಲೆ ಹಾಕಿದಳು.

ಮಹೇಂದ್ರವರ್ಮ-ನರಸಿಂಹವರ್ಮರೂ, ಅವರ ಸೈನಿಕರೂ ಓಡಿ ಹೋಗಿ ಕಂಚಿಯ ಕೋಟೆಯನ್ನು ಹೊಕ್ಕರು. ಕೂಡಲೆ ವೀರಕನ್ನಡಿಗರು ರಭಸದಿಂದ ಸಾಗಿ ಹೋಗಿ ಕಂಚಿಯನ್ನು ಮುತ್ತಿದರು.

ಚಾಲುಕ್ಯರ ಇತಿಹಾಸದಲ್ಲಿ ನರ್ಮದೆಯ ಕಾಳಗದ ತರುವಾಯ ಕಂಚಿಯ ಕದನವೇ ಹೆಚ್ಚು ವಿಖ್ಯಾತವಾದದ್ದೆಂದು ನಿಸ್ಸಂದೇಹವಾಗಿ ಹೇಳಬಹುದು. ಮಹೇಂದ್ರವರ್ಮನು ಕಂಚಿಯ ಕೋಟೆಯನ್ನು ಹೊಕ್ಕು ರಾಜಧಾನಿಯನ್ನು ರಕ್ಷಿಸುವದಕ್ಕಾಗಿ ದೀರ್ಘ ಸಾಹಸ ಮಾಡತೊಡಗಿದನು. ತಮಿಳರು ವಿಲಕ್ಷಣವಾದ ಪ್ರಕಾರದಿಂದ ಹೋರಾಡಿದರೂ ಪುಲಿಕೇಶಿಯ ವೀರಾವೇಶಕ್ಕೆ ಈಡಾಗಲಿಲ್ಲ. ಕನ್ನಡಿಗರು ಕೋಟೆಯ ಬಾಗಿಲನ್ನು ಮುರಿದು ರಾಜಧಾನಿಯನ್ನು ಒಳಹೊಕ್ಕರು. ಮಹೇಂದ್ರವರ್ಮನ ಉಪಟಳದಿಂದ ರೇಗಿಗೆದ್ದ ಕನ್ನಡಿಗರು ಕಂಚಿಯನ್ನು ವಿಧ್ವಂಸ ಮಾಡಲಿಕ್ಕೆ ಪ್ರಾರಂಭಿಸಿದರು. ರಾಜಧಾನಿಯಲ್ಲಿ ಎತ್ತ ನೋಡಿದತ್ತ ಕೊಲೆ-ಸುಲಿಗೆ-ಕೊಳ್ಳೆಗಳು ಪ್ರಾರಂಭವಾದವು. ಪುಲಿಕೇಶಿಯು ರಾಜಧಾನಿಯನ್ನು ಸುಟ್ಟುಸೂರೆ ಮಾಡುವನೆಂದು ಮಹೇಂದ್ರವರ್ಮನು ಧೃತಿಗುಂದಿದನು ಕೂಡಲೆ ಅವನು ಒಪ್ಪಂದಸೂಚಕವಾದ ನಿಶಾನೆಯನ್ನು ದುರ್ಗದ ಮೇಲೆ ನಿಲ್ಲಿಸಿ, ಒಬ್ಬ ಪ್ರತಿನಿಧಿಯನ್ನು ಕರ್ನಾಟಕ ಸಮ್ರಾಟನ ಬಳಿಗೆ ಕಳುಹಿದನು. ತಾನು ಪೂರ್ಣವಾಗಿ ಪರಾಭವಗೊಂಡು ಶರಣು ಬಂದಿರುವೆನೆಂದೂ, ಶರಣಾಗತರಕ್ಷಕರೆಂಬ ಕನ್ನಡಿಗರ ಕೀರ್ತಿಗೆ ಕಲಂಕವನ್ನುಂಟು ಮಾಡಿಕೊಳ್ಳಬಾರದೆಂದೂ ಅವನು ವಿನಂತಿಪತ್ರಿಕೆಯನ್ನು ಬರೆದು, ಅದನ್ನು ಪುಲಿಕೇಶಿಯ ಬಳಿಗೆ ತನ್ನ ಪ್ರತಿನಿಧಿಯೊಡನೆ ಕಳುಹಿಸಿದ್ದನು

ಒಪ್ಪಂದಸೂಚಕ ನಿಶಾನೆಯು ಕೋಟೆಯ ಮೇಲೆ ನಿಲ್ಲಿಸಲ್ಪಟ್ಟ ಕೂಡಲೆ ಪುಲಿಕೇಶಿಯು ಕೊಲೆ-ಸುಲಿಗೆಗಳನ್ನು ನಿಲ್ಲಿಸಬೇಕೆಂದು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಅಷ್ಟರಲ್ಲಿ ಮಹೇಂದ್ರವರ್ಮನ ಪ್ರತಿನಿಧಿಯು ಅಲ್ಲಿಗೆ ಬಂದು ಒಡೆಯನ ವಿನಂತಿಪತ್ರಿಕೆಯನ್ನು ಅವನ

ಸ್ವಾಧೀನದಲ್ಲಿ ಕೊಟ್ಟನು. ನಿಷ್ಕಾರಣವಾಗಿ ಯುದ್ಧಪ್ರಸಂಗವನ್ನೊದಗಿಸಿದ ಮಹೇಂದ್ರವರ್ಮನ ಮೇಲೆ ಪುಲಿಕೇಶಿಯು ಬಹಳ ಸಿಟ್ಟಾಗಿದ್ದನು. ಹಿಂದೆಯೊಮ್ಮೆ ದೊಡ್ಡ ಮನಸ್ಸಿನಿಂದ ಕ್ಷಮಾದಾನ ಮಾಡಿದ್ದರೂ, ಮತ್ತೆ ಅದೇ ವಿಧವಾದ ಉದ್ಧಾಮವೃತ್ತಿಯಿಂದ ನಡೆದ ಪಲ್ಲವರಾಜನ ರಾಜ್ಯವನ್ನು ಕಸಿದುಕೊಳ್ಳಬೇಕೆಂದು ಅವನು ನಿರ್ಧರಿಸಿಕೊಂಡಿದ್ದನು. ವಿಕ್ರಮಾದಿತ್ಯ-ಪ್ರತಾಪವರ್ಮರ ಅಭಿಪ್ರಾಯವಾದರೂ ಇದೇ ಮೇರೆಗಿತ್ತು. ಮಹೇಂದ್ರವರ್ಮ-ನರಸಿಂಹವರ್ಮರನ್ನು ಪಾತಾಳಪಿಪುರಕ್ಕೆ ಸೆರೆ ಹಿಡಿದೊಯ್ಯಬೇಕೆಂತಲೂ, ಕಂಚಿಯ ರಾಜ್ಯದ ಮೇಲೆ ಮತ್ತೊಬ್ಬ ಮಾಂಡಲೀಕ್ವರನನ್ನು ನಿಯಮಿಸಬೇಕೆಂತಲೂ ಅವನು ಸಂಕಲ್ಪ ಮಾಡಿಕೊಂಡನು. ಅಷ್ಟರಲ್ಲಿ ಮಹೇಂದ್ರವರ್ಮನು ತನ್ನ ಮಂತ್ರಿ-ಸೇನಾನಾಯಕರೊಡನೆ ಕೈ ಕಟ್ಟಿಕೊಂಡು ಕರ್ನಾಟಕ ಸಮ್ರಾಟನ ಬಳಿಗೆ ಬಂದನು. ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಅವನು ಪುಲಿಕೇಶಿಗೆ ವಿಜ್ಞಾಪನೆ ಮಾಡಿಕೊಂಡನು.

ಕಂಚಿಯ ಕಾಮಾಕ್ಷಿಯ ದೇವಾಲಯದ ಬಳಿಯ ದೊಡ್ಡ ಬೈಲಲ್ಲಿ ವೀರ ಪುಲಿಕೇಶಿಯು ರಾಹುಟಿಯನ್ನು ಹೊಡೆಯಿಸಿದ್ದನು. ರಾಜಧಾನಿಯಲ್ಲಿ ಶಾಂತತೆಯು ಪ್ರಸ್ಥಾಪಿತವಾಗಿತ್ತು. ಪುಲಿಕೇಶಿ ಮಹಾರಾಜನು ತಮ್ಮ ಅರಸನನ್ನು ಸೆರೆ ಹಿಡಿದುಕೊಂಡು ಹೋಗುವನೆಂದು ಪುರವಾಸಿಗಳು ಭಯಗೊಂಡಿದ್ದರು. ಪಲ್ಲವ ರಾಜ್ಯಕ್ಕೆ ಸೇರಿದ ಪಿಷ್ಟಪುರ ಪ್ರಾಂತವನ್ನು ಅವನು ವಶಮಾಡಿಕೊಂಡನೆಂಬ ಸಿಟ್ಟಿನಿಂದ ತಮ್ಮ ಒಡೆಯನಾದ ಮಹೇಂದ್ರವರ್ಮನು ಅನುಚಿತ ಕಾರ್ಯವನ್ನು ಮಾಡಿ, ಇಡಿ ರಾಜ್ಯಕ್ಕೆ ಹೊರತಾಗುವ ಪ್ರಸಂಗವನ್ನು ತಂದುಕೊಂಡನೆಂದು ಅವರು ಚಿಂತಿಸತೊಡಗಿದ್ದರು. ತಮ್ಮ ಅರಸನ ಅಪರಾಧವನ್ನು ಕ್ಷಮಿಸಿ ಘನವಂತರೆಂಬ ಹೆಸರಿನ ಸಾರ್ಥಕ ಮಾಡಿಕೊಳ್ಳಬೇಕೆಂದು ನಗರವಾಸಿಗಳಾದ ಪ್ರಮುಖಜನರು ಪುಲಿಕೇಶಿಗೆ ಬಿನ್ನಹ ಪತ್ರಿಕೆಗಳನ್ನು ಕಳುಹಿಸಿದ್ದರು; ಎಷ್ಟೋ ಜನರು ಸಮಕ್ಷಭೆಟ್ಟಿಯಾಗಿ, ತಮ್ಮ ಅರಸನಿಗೆ ಕ್ಷಮಾದಾನ ಮಾಡಬೇಕೆಂದು

ಹೇಳತೊಡಗಿದ್ದರು

ಪುಲಿಕೇಶಿಯು ತನ್ನ ರಾಹುಟಿಯಲ್ಲಿ ಕುಳಿತಿದ್ದನು. ಮಹೇಂದ್ರವರ್ಮನು ನಮ್ರಭಾವದಿಂದಲೂ ದೀನಮುದ್ರೆಯಿಂದಲೂ ಅವನ ಸಮ್ಮುಖದಲ್ಲಿ ನಿಂತುಕೊಂಡಿದ್ದನು. ಅವನ ಬಳಿಯಲ್ಲಿಯೇ ನರಸಿಂಹ ವರ್ಮ-ಕಂಚಿಯ ಭಾವೀ ರಾಜ-ನು ನಿಂತಿದ್ದನು. ಆಗ ಪುಲಿಕೇಶಿಯು ಮಹೇಂದ್ರವರ್ಮನನ್ನು ಕುರಿತು:—

"ಮಹೇಂದ್ರವರ್ಮರೆ, ಹಿಂದೆಯೊಮ್ಮೆ ಕ್ಷಮಾದಾನ ಮಾಡಿದ್ದಕ್ಕೆ ನನಗೆ ಪಶ್ಚಾತ್ತಾಪದ ಪ್ರತಿಫಲವನ್ನಿತ್ತಿರಿ. ಈ ಸಾರೆ ನಿಮ್ಮನ್ನು ಕ್ಷಮಿಸಬಾರದೆಂದೇ ನನ್ನ ಸಂಕಲ್ಪವಿರುವದು. ಹಿಂದಕ್ಕೆ ಪ್ರತಾಪವರ್ಮರು ಆಡಿದ ಮಾತಿನ ದೃಷ್ಟಾಂತವು ನನಗೆ ಸತ್ಯವಾಗಿ ತೋರಲಾರಂಭಿಸಿದೆ. ನೀವು ಕೃತಘ್ನರಿರುವದರಿಂದ ಉಪಕಾರವನ್ನು ಸ್ಮರಿಸದೆ, ನೀಚವೃತ್ತಿಯಿಂದ ನಡೆಯಲಾರಂಭಿಸುವಿರಿ. ಈಗ ವಿನಯವನ್ನು ತೋರಿಸುತ್ತಿದ್ದರೂ, ಪ್ರಸಂಗದಲ್ಲಿ ತಿರುಗಿ ಬೀಳಲಿಕ್ಕೆ ನೀವು ಹಿಂಜರಿಯಲಾರಿರಿ. ಕರ್ನಾಟಕ ಸಾಮ್ರಾಜ್ಯಕ್ಕೆ ಪಲ್ಲವರು ಪ್ರಬಲರಾದ ಶತ್ರುಗಳೆಂದೂ, ಎಂದಾದರೂ ಕರ್ನಾಟಕ ಸಾಮ್ರಾಜ್ಯಕ್ಕೆ ಯಾರಿಂದಲಾದರೂ ಕೇಡುಂಟಾಗುತ್ತಿದ್ದರೆ, ಆ ಕೇಡು ಪಲ್ಲವರಿಂದಲೆ ಎಂದೂ ಪ್ರತಾಪವರ್ಮರಾಡಿದ ಮಾತು ಅಸತ್ಯವೆಂದು ಭಾವಿಸಲು ಮಾರ್ಗವಿಲ್ಲದಂತಾಯಿತು."

ಪುಲಿಕೇಶಿಯ ಮಾರ್ಮಿಕ ಮಾತಿನಿಂದ ಮಹೇಂದ್ರವರ್ಮನು ಜರ್ಜರಿತನಾದನು. ಅವನು ಅಪಮಾನದಿಂದ ಮುಖಬಾಗಿಸಿ ನಿಂತುಕೊಂಡನು. ಕ್ಷಮಾಯಾಚನೆ ಮಾಡಲಿಕ್ಕೆ ಸಹ ಅವನ ಬಾಯಿಯು ಏಳದಂತಾಯಿತು. ಆಗ ಯುವರಾಜನಾದ ನರಸಿಂಹವರ್ಮನು ವಿನಯದಿಂದ:—

"ಕರ್ನಾಟಕ ಸಾರ್ವಭೌಮರೆ, ಇದೊಂದು ಸಾರೆ ನಮ್ಮ ಅಪರಾಧವನ್ನು ಕ್ಷಮಿಸಿರಿ. ಕೃತಾಪರಾಧದ ಬಗ್ಗೆ ನಮಗೆ ಪಶ್ಚಾತ್ತಾಪವಾಗಿದೆ. ನಮ್ಮ ಉದ್ಧಾಮತನಕ್ಕಾಗಿಯೇ ರಾಜಧಾನಿಯು

ಹಾಳಾಯಿತು ಇದೇ ಹಾನಿಯು ನಮ್ಮ ಅಪರಾಧಕ್ಕೆ ತಕ್ಕ ದಂಡನೆಯಾಗಿರುವದು. ಇನ್ನು ಮೇಲೆ ಕೊನೆಯು ವರೆಗೆ ಚಾಲುಕ್ಯಸಾರ್ವಭೌಮರೊಡನೆ ಸ್ನೇಹದಿಂದ ನಡೆದುಕೊಳ್ಳುವೆವು. ಇದೊಂದು ಬಾರಿ ಮಾತ್ರ ಕ್ಷಮಾದಾನ ಮಾಡಬೇಕೆಂದು ಪ್ರಾರ್ಥನೆಯು."

"ನರಸಿಂಹವರ್ಮರೆ, ಈ ಕಂಚಿಯು ಕದನವು ನನಗಾದರೂ ವಿಶೇಷ ಹಾನಿಯನ್ನುಂಟು ಮಾಡಿರುವದು. ನಿಷ್ಕಾರಣವಾಗಿ ಯುದ್ಧ ಪ್ರಸಂಗವನ್ನುಂಟು ಮಾಡಿದ ನಿಮ್ಮ ರಾಜ್ಯವನ್ನೇ ಸೆಳೆದುಕೊಳ್ಳಬೇಕೆಂದು ನನ್ನ ಮನೀಷೆಯಿರುವದು."

ಹೀಗೆ ಪುಲಿಕೇಶಿಯು ನುಡಿದ ಕೂಡಲೆ ಮಹೇಂದ್ರವರ್ಮನು ಭಯಭೀತಿಯಿಂದ: – "ಸಾರ್ವಭೌಮರೆ, ಮೊರೆ ಹೊಕ್ಕವರನ್ನು ಕೊಲ್ಲದೆ, ಅವರ ರಕ್ಷಣೆ ಮಾಡುವದು ಕ್ಷತ್ರಿಯರಿಗೆ ಭೂಷಣಾವಹ ವಿರುವದು ಈ ಪಲ್ಲವರಾಜನು ತನ್ನ ಮುಕುಟವನ್ನು ನಿಮ್ಮ ಪಾದಗಳ ಮೇಲೆ ಇರಿಸಿರುವನು. ನೀವು ಅದನ್ನು ಕ್ಷಮಿಸುವಿರೊ, ಪದ ತಾಡನೆಯಿಂದ ವಿಧ್ವಂಸ ಮಾಡುವಿರೊ? ನಿಮ್ಮ ಸದಸದ್ವಿವೇಕ ಬುದ್ಧಿಗೆ ಹೇಗೆ ತೋಚುವದೋ ಅದರಂತೆ ಮಾಡಿರಿ."

ಮಹೇಂದ್ರವರ್ಮನು ಈ ಪ್ರಕಾರ ನುಡಿದು, ತನ್ನ ಮುಕುಟವನ್ನು ಪುಲಿಕೇಶಿಯು ಪಾದಗಳ ಮೇಲಿರಿಸಿ ಕೈ ಜೋಡಿಸಿಕೊಂಡು ನಿಂತನು. ಆಗ ಪುಲಿಕೇಶಿಯ ಸಂತಾಪವು ಪೂರ್ಣ ನಾಶವಾಯಿತು. ಕಂಚಿಯು ಕದನದ ದಣಿವು ಸಂಪೂರ್ಣವಾಗಿ ಪರಿಹಾರವಾಯಿತು. ಮಹಾನುಭಾವರಲ್ಲಿ ಸದೈವ ವಾಸಿಸುತ್ತಿದ್ದ ಸದಸದ್ವಿವೇಕಬುದ್ಧಿಯು ಜಾಗ್ರತವಾಯಿತು ಅವನು ಮಹೇಂದ್ರವರ್ಮನಿಗೂ ನರಸಿಂಹವರ್ಮನಿಗೂ ಅಭಯದಾನ ಮಾಡಿ, ಕೃತಾಪರಾಧವನ್ನು ಕ್ಷಮಿಸಿದನು. ಅವನು ರಾಜಮುಕುಟವನ್ನು ಮಹೇಂದ್ರವರ್ಮನ ತಲೆಯ ಮೇಲಿಟ್ಟನು. ಅವನು ಪಲ್ಲವರಾಜ್ಯದೊಳಗಿನ ಕೆಲವು ಭಾಗವನ್ನು ಮಾತ್ರ ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು. ಅನಂತರದಲ್ಲಿ ಮಹೇಂದ್ರವರ್ಮನ ಆದರಾತಿಥ್ಯವನ್ನು ಸ್ವೀಕರಿಸಿ, ಎರಡು ದಿನ ಕಂಚಿಯು

ಲ್ಲಿದ್ದು, ಹೇರಳವಾದ ಕಾಣಿಕೆಯನ್ನು ತೆಗೆದುಕೊಂಡು, ಅವನು ತನ್ನ ರಾಜಧಾನಿಗೆ ಹೊರಟನು.

ಕಂಚಿಯ ಕದನದಿಂದ ಪುಲಿಕೇಶಿಯ ಸಾಮರ್ಥ್ಯವು ದಕ್ಷಿಣಾತ್ಯರಿಗೆಲ್ಲರಿಗೂ ಗೊತ್ತಾಯಿತು ಚೋಳ, ಚೇರ, ಪಾಂಡ್ಯ ಮೊದಲಾದ ಅರಸರು ಕಂಚಿಯ ಕದನದಲ್ಲಿ ವಿಜಯಶಾಲಿಯಾದ ಪುಲಿಕೇಶಿಯನ್ನು ವಿರೋಧಿಸಲಾರದೆ, ಅವನ ಮಾಂಡಲಿಕತ್ವಕ್ಕೆ ಒಪ್ಪಿಕೊಂಡರು ದಕ್ಷಿಣದಲ್ಲೆಲ್ಲ ಪುಲಿಕೇಶಿಯ ಕೀರ್ತಿಯನ್ನು ಚೆನ್ನಾಗಿ ವಿಸ್ತರಿಸಿದ್ದೆಂದರೆ, ಕಂಚಿಯ ಕದನವೇ!



## ನಿಮ್ಮ ಜೀವಿತಕ್ಕೆ ಧಿಃಕಾರವು!

ಕುಮಾರ ವಿಕ್ರಮಾದಿತ್ಯನು ಮಿಕ್ಕ ಮಕ್ಕಳಿಗಿಂತ ಹೆಚ್ಚಿನ ಕರ್ತವ್ಯನಿಷ್ಠನೂ, ಶೂರನೂ, ಸಾಹಸಿಯೂ, ಸದ್ಗುಣಿಯೂ ಇದ್ದುದರಿಂದ, ತನ್ನ ತರುವಾಯ ಚಾಲುಕ್ಯ ಸಾಮ್ರಾಜ್ಯದ ಸಿಂಹಾಸನದ ಮೇಲೆ ಅವನೇ ವಿರಾಜಮಾನನಾಗಬೇಕೆಂಬ ಉದ್ದೇಶದಿಂದ ಪುಲಿಕೇಶಿಯು ಅವನನ್ನು ರಾಜಧಾನಿಯಲ್ಲಿಯೇ ಇಟ್ಟುಕೊಂಡು, ಉಳಿದ ಮಕ್ಕಳನ್ನು ಸಾಮ್ರಾಜ್ಯದೊಳಗಿನ ಒಂದೊಂದು ಪ್ರಾಂತಗಳ ಮಾಂಡಲಿಕರನ್ನಾಗಿ ಮಾಡಿದ್ದನು. ಅವನ ಈ ಕೃತಿಯು ಹಿರಿಯ ಮಗನಾದ ಆದಿತ್ಯವರ್ಮನ ಮನಸ್ಸಿಗೆ ಬರಲಿಲ್ಲ. ತಾನು ಪಟ್ಟಬಾಧ್ಯನಾಗಿದ್ದರೂ, ಒಂದು ಪ್ರಾಂತದ ಮಂಡಲೇಶ್ವರನನ್ನಾಗಮಾಡಿ ವಿಕ್ರಮಾದಿತ್ಯನನ್ನೇ ಯುವರಾಜನನ್ನಾಗಿ ಮಾಡಿದ್ದರಿಂದ, ಅವನು ಪುಲಿಕೇಶಿಯ ಮೇಲೆ ಕ್ಷೋಭೆಗೊಂಡಿದ್ದನು. ಹೇಗಾದರೂ ಮಾಡಿ ವಿಕ್ರಮಾದಿತ್ಯನನ್ನು ನಾಶಗೊಳಿಸಿ ವಾತಾಪಿಪುರದ ಸಿಂಹಾಸನವನ್ನು ಸ್ವಾಧೀನದಲ್ಲಿ ತೆಗೆದುಕೊಳ್ಳಬೇಕೆಂದು ಅವನ ಮಹತ್ವಾಕಾಂಕ್ಷೆಯಿತ್ತು. ವಿಕ್ರಮಶಾಲಿಯಾದ ಪುಲಿಕೇಶಿಯ ಮುಂದೆ ತನ್ನ ಆಟವೇನೂ ನಡೆಯಲಾರದೆಂಬ ನಂಬಿಗೆಯು ಅವನಿಗಿದ್ದುದರಿಂದ, ತನ್ನ ಕಾರಸ್ಥಾನದಲ್ಲಿ ಚಂದ್ರಾದಿತ್ಯನನ್ನು ತೆಗೆದುಕೊಳ್ಳಬೇಕೆಂದು ಹವಣಿಸಿದ್ದನು. ಕೆಲವು ದಿನಗಳ

ವರೆಗೆ ಆ ಸಹೋದರರಲ್ಲಿ ಪತ್ರವ್ಯವಹಾರವು ನಡೆದು, ಆದಿತ್ಯವ ರ್ಮನ ಕಾರಸ್ಥಾನದಲ್ಲಿ ಭಾಗತೆಗೆದುಕೊಳ್ಳುವದಕ್ಕೆ ಚಂದ್ರಾದಿತ್ಯನು ಒಪ್ಪಿದನು. ವಿಕ್ರಮಾದಿತ್ಯನನ್ನು ನಾಶಗೊಳಿಸಿ ಕರ್ನಾಟಕಸಾಮ್ರಾಜ್ಯ ವನ್ನು ಇಬ್ಬರೂ ಸಮವಾಗಿ ತೆಗೆದುಕೊಳ್ಳಬೇಕೆಂದು ಅವರು ನಿಶ್ಚ ಯಿಸಿಕೊಂಡರು. ಪುಲಿಕೇಶಿಯು ಜೀವದಿಂದಿರುವ ವರೆಗೆ ತಮ್ಮ ಸಾಹಸಕ್ಕೆ ಯಶವು ದೊರೆಯುವದಿಲ್ಲವೆಂಬದು ಅವರಿಗೆ ಗೊತ್ತಾದ್ದ ರಿಂದ, ಅವರು ಗುಪ್ತರೀತಿಯಿಂದ ತಮ್ಮ ಪಕ್ಷವನ್ನು ಬಲಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದರು ಅನೇಕ ಮಾಂಡಲಿಕ ರಾಜರನ್ನೂ, ಸರದಾರ-ಸೇನಾಪತಿಗಳನ್ನೂ ತಮ್ಮ ಪಕ್ಷಕ್ಕೆ ತೆಗೆದುಕೊಳ್ಳುವದ ಕ್ಕಾಗಿ ಆ ಬಂಧುಗಳು ದೀರ್ಘಪ್ರಯತ್ನ ನಡೆಯಿಸಿದ್ದರು.

ಶಾಂತಿವರ್ಮನು ಚಂದ್ರಾದಿತ್ಯನ ಸ್ನೇಹಿತನಾಗಿದ್ದನು ಯಾವ ದೊಂದು ಪ್ರಾಂತದ ಸಾಮಂತನನ್ನು ಮಾಡುವೆನೆಂದು ಚಂದ್ರಾ ದಿತ್ಯನು ತಿಳಿಸಿದ್ದರಿಂದ, ಅವನ ಗುಪ್ತ ಕಾರಸ್ಥಾನದಲ್ಲಿ ಸೇರಬೇಕೆಂದು ಶಾಂತಿವರ್ಮನು ದೃಢನಿಶ್ಚಯ ಮಾಡಿಕೊಂಡನು ಮಂತ್ರಿ-ಸೇನಾ ನಾಯಕರಾಗಿದ್ದು ಕಡೆತನಕ ಸೇವಾವೃತ್ತಿಯಿಂದ ಬಾಳುವದಕ್ಕಿಂತ, ಅರಸೊತ್ತಿಗೆಯನ್ನು ಪಡೆಯುವದು ಮೇಲೆಂದು ಅವನ ಮನೋದೇವ ತೆಯು ಹೇಳಲಾರಂಭಿಸಿತ್ತು. ಅಂತೆಯೇ ಆ ಕ್ಷುದ್ರಹೃದಯಿಯು ರಾಜ್ಯಲಾಲಸೆಯಿಂದ ಚಾಲುಕ್ಯ ಸಿಂಹಾಸನದ ದ್ರೋಹಚಿಂತನೆಗಾಗಿ ಸಜ್ಜಾಗಿದ್ದನು ಸ್ವಾರ್ಥವೇ ಮುಖ್ಯಧರ್ಮವೆಂದು ತಿಳಿದುಕೊಳ್ಳುವ ರಾಷ್ಟ್ರದ್ರೋಹಿಗಳು ಎಂತಹ ಕೆಲಸಗಳನ್ನಾದರೂ ಮಾಡಲಿಕ್ಕೆ ಹಿಂಜರಿಯುವದಿಲ್ಲ ರೇವತಿದ್ವೀಪಕ್ಕೆ ಹೋಗಿ, ಹೊತ್ತತೊಡಗಿರುವ ಅಂತಃಕಲಹಾಗ್ನಿಗೆ ಗಾಳಿಯನ್ನು ಹಾಕಿ, ಮತ್ತಷ್ಟು ಪ್ರಜ್ವಲಿತವಾಗು ವಂತೆ ಮಾಡಬೇಕೆಂದು ಅವನ ಹವಣಿಕೆಯಿತ್ತು. ಆದಿತ್ಯವರ್ಮ-ಚಂದ್ರಾದಿತ್ಯರ ಪಕ್ಷವೇ ಅವನಿಗೆ ಸಶ್ರೇಷ್ಠವಾಗಿ ತೋರಲಾರಂಭಿಸಿತು. ಅಂತೆಯೇ ಅವನು ಪತ್ನಿಯೊಂದಿಗೆ ವಾತಾಪಿಪುರದಿಂದ ಪ್ರಸ್ಥಾನ ಕಟ್ಟುವದಕ್ಕೆ ಸಿದ್ಧನಾದನು.

ಪತಿಯು ಶೂರನೂ ಸಾಹಸಿಯೂ ಇರುವನೆಂಬದು ರೇವತಿಗೆ ಗೊತ್ತಿತ್ತು. ಅವನು ಸುಖ-ವಿಲಾಸಗಳ ಸೆಳವಿಗೆ ಸಿಲುಕಿ ಕರ್ತೃತ್ವ ಹೀನನಾಗಿರುವನೆಂದೂ. ಮುಂದೆ ಅವನ ಸ್ವಭಾವದಲ್ಲಿ ವಿಪರ್ಯಾಸ ವಾಗಬಹುದೆಂದೂ ಅವಳು ಸಮಾಧಾನಗೊಂಡಿದ್ದಳು ಪತಿಯು ಹೊತ್ತುತ್ತಿರುವ ಗೃಹಕಲಹದ ಬೇಗೆಯನ್ನು ಹಬ್ಬಿಸುವದಕ್ಕಾಗಿ ರಾಜಧಾನಿಯಿಂದ ಹೊರಡುವವನಿರುವನೆಂಬದು ರೇವತಿಗೆ ಗೊತ್ತಾದ ಕೂಡಲೆ, ಆ ಸ್ವದೇಶಪ್ರೇಮಿಗೆ ಮರಣಪ್ರಾಯವಾದ ವ್ಯಥೆಯೇ ಆಯಿತು. ಅವಳು ಪತಿಯ ಮನಸ್ಸನ್ನು ತಿರುಗಿಸುವದಕ್ಕಾಗಿ ಶಕ್ತಿ ಮೀರಿ ಯತ್ನಿಸಿದರೂ, ಅವನು ತನ್ನ ನಿಶ್ಚಯವನ್ನು ತಿರುಗಿಸಲಿಲ್ಲ. ಇಷ್ಟಲ್ಲದೆ, ತನ್ನ ಮಹಾ ಕಾರ್ಯಕ್ಕಾಗಿ ಸಂಗಡ ಬರಬೇಕೆಂದು ರೇವತಿಗೆ ಅವನು ಬಹು ಪರಿಯಾಗಿ ಹೇಳತೊಡಗಿದ್ದನು.

ಪುಲಿಕೇಶಿಯೂ ಅವನ ಸೇನಾಪತಿಯಾದ ಪ್ರತಾಪವರ್ಮನೂ ಯುವರಾಜನಾದ ವಿಕ್ರಮಾದಿತ್ಯನೂ ಪಲ್ಲವರ ಮೇಲೆ ದಂಡೆತ್ತಿ ಹೋಗಿದ್ದುದರಿಂದ, ರಾಜಧಾನಿಯನ್ನು ರಕ್ಷಿಸುವ ಭಾರವು ವೀರ ಸೇನನ ಮೇಲೆಯೇ ಬಿದ್ದಿತ್ತು. ತನ್ನ ಅಳಿಯನು ಪ್ರಸಂಗದಲ್ಲಿ ತನಗೆ ನೆರವಾಗಬಹುದೆಂದು ಅವನು ಧೈರ್ಯ ತಾಳಿದ್ದನು; ಆದರೆ ಅವನು ರೇವತಿದ್ವೀಪಕ್ಕೆ ಹೊರಡುವವನಿರುವನೆಂಬ ವಾರ್ತೆಯನ್ನು ಕೇಳಿದಾಗಿನಿಂದ ಶಾಂತಿವರ್ಮನ ಈ ವರ್ತನದ ಬಗ್ಗೆ ವೀರಸೇನನು ಕ್ರೋಧಗೊಂಡನು ಮಹಾರಾಜರು ಬರುವವರೆಗೆ ರಾಜಧಾನಿಯಲ್ಲಿ ರಬೇಕೆಂದು ಅವನು ಶಾಂತಿವರ್ಮನಿಗೆ ಬಹು ಪರಿಯಾಗಿ ಹೇಳಿದರೂ ಆತನು ಆ ಮಾತಿಗೆ ಒಪ್ಪಲಿಲ್ಲ ರೇವತಿದ್ವೀಪಕ್ಕೆ ಹೊರಡುವ ಬಗ್ಗೆ ಮಹಾರಾಜರಿಂದ ಅಪ್ಪಣೆ ಪಡೆದಿರುವೆನೆಂದು ಶಾಂತಿವರ್ಮನು ಮಾವನಿಗೆ ಹೇಳಿ, ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದನು ಇಷ್ಟು ಆತುರದಿಂದ ಅವನು ರೇವತಿದ್ವೀಪಕ್ಕೆ ಹೊರಡುವ ಕಾರಣವೇನಿರ ಬಹುದೆಂದು ವೀರಸೇನನು ವಿಚಾರಕ್ಕೊಳಗಾಗಿದ್ದನು. ಎಷ್ಟು ವಿಧ ವಾಗಿ ವಿಚಾರಿಸಿದರೂ ಅವನಿಗೆ ಈ ಮಾತಿನ ನಿರ್ಣಯವಾಗಲಿಲ್ಲ.

ಈ ವಿಷಯದಲ್ಲಿ ತನ್ನ ಪುತ್ರಿಗೆ ಏನಾದರೂ ಸಂಗತಿಯು ಗೊತ್ತಿರ ಬಹುದೆಂದು ತಿಳಿದು ಅವಳನ್ನು ಓಲಗದ ಕೋಣೆಗೆ ಕರೆಯಿಸಿದನು.

"ರೇವತಿ, ಶಾಂತಿವರ್ಮನು ರೇವತಿದ್ವೀಪಕ್ಕೆ ಹೊರಡುವ ಕಾರಣವೇನಿರುವದು?"

"ವೀರಸೇನನ ಮಾತಿನಿಂದ ರೇವತಿಯು ಗೊಂದಲದಲ್ಲಿ ಬಿದ್ದಳು. ತನ್ನ ಪತಿಯ ಮನೋಗತವನ್ನು ಹೊರಗೆಡಹಬಾರದೆಂದು ಅವಳು ನಿಶ್ಚಯಿಸಿಕೊಂಡಿದ್ದಳು. ತನ್ನ ತಂದೆಗೆ ಏನಾದರೂ ಸಮಾಧಾನದ ಮಾತುಗಳನ್ನು ಹೇಳಬೇಕೆಂದು ನಿಶ್ಚಯಿಸಿಕೊಂಡು:—

"ಅಪ್ಪಾ, ಚಂದ್ರಾದಿತ್ಯರು ಅವರನ್ನು ಭೆಟ್ಟಿಯ ಸಲುವಾಗಿ ಕರೆಯಿಸಿರಬಹುದೆಂಬಂತೆ ತೋರುವದು"

"ಮಹಾರಾಜರು ಕಂಚಿಯಿಂದ ಬರುವ ವರೆಗೆ ನಿಲ್ಲಲು ಅವ ಕಾಶವಿಲ್ಲದಷ್ಟು ಭೆಟ್ಟಿಯ ಆತುರತೆಯೇನಿರುವದು?" ಎಂದು ವೀರ ಸೇನನು ನುಡಿದು, ನಿಶ್ಚಯಾತ್ಮಕವಾಣಿಯಿಂದ:—"ನಿನ್ನ ಪತಿಯಲ್ಲಿ ಕರ್ತೃತ್ವವೇ ಇರುವದಿಲ್ಲ. ರಾಜಧಾನಿಯಲ್ಲಿದ್ದರೆ ಏನಾದರೂ ಕರ್ತವ್ಯ ವನ್ನು ಜರುಗಿಸಬೇಕಾಗುವದೆಂದು ತಿಳಿದು, ಅವನು ರೇವತಿದ್ವೀಪಕ್ಕೆ ಹೊರಡಲು ಸಿದ್ಧನಾಗಿರುವನೆಂದು ನನ್ನ ಅನುಮಾನವಿರುವದು."

'ಹಿಂದುವೇಳೆ ವಸ್ತುಸ್ಥಿತಿಯು ಹೀಗಿದ್ದರೂ ಇರಬಹುದಾಗಿದೆ'

"ನೀನು ಅವನೊಡನೆ ಹೊರಡುವೆಯೇನು?"

"ಪತಿಯ ಸನ್ನಿಧಾನದಲ್ಲಿರುವದು ಸಾಧ್ವಿಯರಿಗೆ ಯೋಗ್ಯವಾ ದದ್ದಾಗಿದ್ದರೂ, ನಾನು ಅವರೊಡನೆ ಹೊರಡಬಾರದೆಂಬ ನಿಶ್ಚಯ ವುಳ್ಳವಳಾಗಿರುವೆನು. ನಿಮ್ಮ ಅನುಮಾನದಂತೆ ಅವರ ಮನಸ್ಥಿತಿ ಯಾಗಿದ್ದರೆ, ನಾನು ಸ್ಥಿರವಾಗಿ ವಾತಾಪಿಪುರಕ್ಕೆ ಎರವಾಗಬೇಕಾ ದೀತು; ಹಾಗು ಅವರಾದಗೂ ಇಲ್ಲಿಗೆ ಬರಲಾರರು ಅವರು ರೇವತಿ ದ್ವೀಪದಲ್ಲಿ ಸ್ಥಿರವಾಗಿ ವಾಸಮಾಡತೊಡಗಿದರೆ, ಪರಂಪರವಾಗಿ ನಡೆದು ಬಂದ ಕರ್ನಾಟಕ ಸಾಮ್ರಾಜ್ಯದ ಮುಖ್ಯ ಸೇನಾಧಿಪತ್ಯ ಪದಕ್ಕೆ ಹೊರತಾಗುವ ಪ್ರಸಂಗವು ನಮ್ಮ ವಂಶಜರಿಗೆ ಬರುವದು."

ಎಂದು ರೇವತಿಯು ನುಡಿದು, ದೈನ್ಯತೆಯಿಂದ ತಂದೆಯನ್ನು ಕುರಿತು: "ನೀವು ಅವರಿಗೆ ಚನ್ನಾಗಿ ಉಪದೇಶಿಸಿ, ಅವರ ವಿಚಾರಗಳನ್ನು ತಿರುಗಿಸಿದರೆ ಹಿತವಾಗುವದು."

"ರೇವತಿ, ಮೂರ್ಖರಿಗೆ ಉಪದೇಶ ಮಾಡಿದರೆ ಅದರ ಪರಿಣಾಮವು ವಿಪರೀತವಾಗುತ್ತದೆ. ನಾನು ಅವನಿಗೆ ಯಾವ ಬಗೆಯಿಂದಲೂ ಬೋಧ ಮಾಡಬಾರದೆಂದು ನಿಶ್ಚಯಿಸಿಕೊಂಡಿರುವೆನು. ನೀನೇ ಸಾಧ್ಯವಾದ ಮಟ್ಟಿಗೆ ಯತ್ನಿಸಿ ಅವನನ್ನು ಹಾದಿಗೆ ಹಚ್ಚು."

ವೀರಸೇನನು ಹೀಗೆ ನುಡಿಯುತ್ತಿರಲು, ಸೇವಕನು ಅಲ್ಲಿಗೆ ಬಂದು:—

"ಶಾಂತಿವರ್ಮರು ಕರೆತರುವದಕ್ಕೆ ಹೇಳಿರುವರು" ಎಂದು ರೇವತಿದೇವಿಗೆ ವಿಜ್ಞಾಪಿಸಿದನು. ಕೂಡಲೆ ಅವಳು ತಂದೆಯಿಂದ ನಿರೋಪ ಹೊಂದಿ ತನ್ನ ಮಂದಿರಕ್ಕೆ ತೆರಳಿದಳು.

ಶಾಂತಿವರ್ಮನು ಪತ್ನಿಯು ಮಾರ್ಗನಿರೀಕ್ಷಣೆ ಮಾಡುತ್ತ ತನ್ನ ಹಿಲಗದ ಕೋಣೆಯಲ್ಲಿ ಕುಳಿತಿದ್ದನು. ಅವನ ಸೇವಕರು ಪ್ರಯಾಣದ ಪೂರ್ವಸಿದ್ಧತೆಯನ್ನು ನಡೆಯಿಸಿದ್ದರು. ಅಷ್ಟರಲ್ಲಿ ರೇವತಿಯು ಅಲ್ಲಿಗೆ ಬರಲು, ಶಾಂತಿವರ್ಮನು ಅವಳನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು:—

"ಪ್ರಿಯಕರೆ, ನಾಳೆ ಸೂರ್ಯೋದಯವಾಗುವದರೊಳಗೆ ವಾತಾಪಿಪುರವನ್ನು ಬಿಡಬೇಕೆಂದು ನಿರ್ಧರಿಸಿರುವೆನು. ಪ್ರಯಾಣಕಾಲವು ಸನ್ನಿಹಿತವಾಗಿದ್ದರೂ ನೀನು ತಟಸ್ಥವೃತ್ತಿಯನ್ನಂಗೀಕರಿಸಿದ್ದನ್ನು ನೋಡಿ ನನಗೆ ವಿಸ್ಮಯವೆನಿಸಿದೆ."

"ನಾನು ಮಾಡಬೇಕಾದುದೇನು? ಹೋಗುವವರ ಕಾಲು ಹೊರಗೇ!"

'ಅದೇಕೆ?' ಎಂದು ಶಾಂತಿವರ್ಮನು ವಿಸ್ಮಯದಿಂದ ನುಡಿದು: "ನೀನು ರೇವತಿದ್ವೀಪಕ್ಕೆ ಬರುವದಿಲ್ಲವೇನು?"

"ಅಲ್ಲಿ ನನ್ನ ಕಾರ್ಯವೇನಿರುವದು?"

"ರೇವತಿ ಹಾಗೆಂದರೇನು? ನನ್ನ ಕಾರ್ಯವು ಬೇರೆ, ನಿನ್ನ ಕಾರ್ಯವು ಬೇರೆ; ಹೀಗೇನಾದರೂ ದ್ವಿಧಾಭಾವವಿರುವದೇನು?"

"ಅಂತೆಯೇ ನಾನು ಅಲ್ಲಿಗೆ ಬರುವದಿಲ್ಲವೆಂದು ಸ್ಪಷ್ಟವಾಗಿ ಹೇಳುವ ಪ್ರಸಂಗವೊದಗಿರುವದು" ಎಂದು ರೇವತಿಯು ನುಡಿದು, ಸಂತಾಪಯುಕ್ತಳಾಗಿ:—"ನೀವು ರಾಜಪದವು ದೊರೆಯಬೇಕೆಂಬ ಆಸುರೀಲಾಲಸೆಗೊಳಗಾಗಿ ದೇಶದ್ರೋಹ, ಸ್ವಜನದ್ರೋಹದಂತಹ ಘೋರಕರ್ಮಗಳನ್ನು ಆಚರಿಸತೊಡಗಿರುವಿರಿ. ರಾಜನಿಷ್ಠೆಯಂತಹ ಸದ್ಧರ್ಮವನ್ನು ಕಾಲಬುಡಕ್ಕೆ ಹಾಕಿ, ರಾಜದ್ರೋಹಕ್ಕೆ ಸಜ್ಜಾಗಿರುವಿರಿ. ನಿಮ್ಮಂತಹ ರಾಕ್ಷಸೀ ಹೃದಯಿಗಳ ಪಾತಕೀಮುಖವನ್ನು ನೋಡಲು ಸಹ ನನ್ನ ಮನಸ್ಸು ಹೇಸಿಕೊಳ್ಳುತ್ತಿರುವಾಗ, ನಿಮ್ಮ ಬಳಿಯಲ್ಲಿದ್ದು ನೀಚಕೃತಿಗಳನ್ನು ಕಣ್ಣಾರೆ ನೋಡಬೇಕೆಂದು ರೇವತಿ ದ್ವೀಪಕ್ಕೆ ಬರಲಾ? ಸಾಗಲಿ, ನಿಮ್ಮ ತಾಂಡವನೃತ್ಯವು!"

"ಇದೇನು ಹೇಳುವೆ? ಚಂದ್ರಾದಿತ್ಯರೂ ಆದಿತ್ಯವರ್ಮರೂ ನಮಗೆ ರಾಜರಲ್ಲವೆ? ವಿಕ್ರಮಾದಿತ್ಯರಿಗಿಂತಲೂ ಅವರ ಅಧಿಕಾರವು ಈ ಕರ್ನಾಟಕ ಸಾಮ್ರಾಜ್ಯದ ಮೇಲೆ ಹೆಚ್ಚಾಗಿರುವದಿಲ್ಲವೆ? ಪಟ್ಟಬಾಧ್ಯರ ಪಕ್ಷವನ್ನು ವಹಿಸಿ, ಶೌರ್ಯ-ಸಾಹಸಗಳನ್ನು ವ್ಯಕ್ತ ಮಾಡಿ ಯಾವದೊಂದು ಪ್ರಾಂತದ ಒಡೆತನವನ್ನು ಸಂಪಾದಿಸಿಕೊಳ್ಳುವ ಸುವರ್ಣಸಂಧಿಯನ್ನು ವ್ಯರ್ಥವಾಗಗೊಡ ಹೇಳುವಿಯಾ? ಪ್ರಿಯೆ, ರಾಜನ ರಾಣಿಯಾಗುವ ಭಾಗ್ಯವನ್ನು ನೀನು ತಿರಸ್ಕರಿಸುವದನ್ನು ನೋಡಿದರೆ, ನಿನಗೆ ಹುಚ್ಚಿಯೆಂದು ಅದಾರು ಅನ್ನಲಿಕ್ಕಿಲ್ಲ?"

"ನಿಮ್ಮಂತಹ ಜಾಣರಿದ್ದರೆ ರಾಜ್ಯವು ಮೂಲಿಗುಂಪಾಗುವದೇ ಸರಿ. ನನಗೆ ರಾಜ್ಞೀಪದವು ಬೇಡ; ರಾಜದ್ರೋಹವನ್ನು ಮಾಡಿ ಇಂದ್ರಪದವಿಯನ್ನು ಹೊಂದುವದಕ್ಕಿಂತ ರಾಜನಿಷ್ಠರಾಗಿ ಬಾಳುವದೇ ಶ್ರೇಯಸ್ಕರವಾಗಿರುವದು" ಎಂದು ರೇವತಿಯು ನುಡಿದು:— "ಪಟ್ಟಬಾಧ್ಯರಾರು-ಅಬಾಧ್ಯರಾರು? ಎಂಬದನ್ನು ನಿರ್ಣಯಿಸುವ ಅಧಿಕಾರವು ನಮ್ಮದಲ್ಲ. ಕರ್ನಾಟಕ ಸಾಮ್ರಾಜ್ಯ ಚಕ್ರವನ್ನು ಸಾಗಿ

ಸಲು ಅರ್ಹರಿರುವರೆಂಬದನ್ನು ನಿಶ್ಚಯಿಸಿ, ಪುಲಿಕೇಶಿ ಮಹಾರಾಜರು ವಿಕ್ರಮಾದಿತ್ಯರನ್ನು ಯುವರಾಜರನ್ನಾಗಿ ಮಾಡಿರುವರು."

"ಆದಿತ್ಯವರ್ಮರು ಹೇಡಿಗಳಿರುವದಿಲ್ಲ. ಅವರು ಕರ್ನಾಟಕ ಸಾಮ್ರಾಜ್ಯಶಕಟವನ್ನು ಸಾಗಿಸಲು ಸಮರ್ಥರಿರುವರು. ಪಟ್ಟಬಾಧ್ಯರಾದವರನ್ನು ಮೂಲೆಗೊತ್ತಿ, ಅನ್ಯಾಕ್ರಾಂತ ಮಾಡಲೆಳಸುವವರ ಗತಿಯೇನಾಗುವದೆಂಬದು ಪುಲಿಕೇಶಿ ಮಹಾರಾಜರ ನಿದರ್ಶನಕ್ಕೆ ಬಂದ ಮಾತಾಗಿರುವದು. ಮಂಗಳೇಶನು ತಾನೇ ರಾಜನಾಗಬೇಕೆಂದು ಹವಣಿಸಿದ್ದಿಲ್ಲವೆ? ಮಹಾರಾಜರೂ ನಿಮ್ಮ ತಂದೆಯವರೂ ಕಾರಸ್ಥಾನವನ್ನು ನಡೆಯಿಸಿ ಅವನ ಕೊಲೆ ಮಾಡಿ, ಸತ್ಯಮೇವ ಜಯತೆ ಎಂಬ ತ್ರಿಕಾಲಾಬಾಧಿತವಾದ ತತ್ವವನ್ನು ಅವರು ಜಗತ್ತಿನ ನಿದರ್ಶನಕ್ಕೆ ತಂದುಕೊಡಲಿಲ್ಲವೆ? ಇಂತಹ ನಿಸ್ಪೃಹಿಗಳೂ ಸಮಂತಾದೃಷ್ಟಿಯವರೂ ಆದ ಮಹಾರಾಜರು ಅನ್ಯಾಯ ಮಾಡತೊಡಗಿದರೆ, ಅದೇ ಸಿದ್ಧಾಂತವನ್ನು ತೋರಿಸುವ ಪ್ರಸಂಗವು ಸತ್ಪಕ್ಷಪಾತಿಗಳಾದ ಜನರಿಗೆ ಬಾರದಿರುವದೆ?"

"ಪ್ರಿಯರೆ, ನಿಮ್ಮ ಕಲ್ಪನೆಯು ತಪ್ಪಾಗಿರುವದು. ಮಹಾರಾಜರು ಕುಮಾರ ವಿಕ್ರಮಾದಿತ್ಯರಲ್ಲಿ ಹೆಚ್ಚಿನ ಪ್ರೀತಿಯನ್ನು ತಳೆದಿರುವದು ನಿಜವು. ಯುವರಾಜರು ಗುಣಾಢ್ಯರಿರುವದರಿಂದಲೆ ಅವರಲ್ಲಿ ಮಹಾರಾಜರು ಹೆಚ್ಚಾಗಿ ಪ್ರೀತಿಯುಳ್ಳವರಾಗಿರುವರು. ದಕ್ಷಿಣಾಪಥದ ಸಾಮ್ರಾಜ್ಯಶಕಟವನ್ನು ಸಾಗಿಸುವ ಪ್ರಭಾವಶಾಲಿಗಳು ವಿಕ್ರಮಾದಿತ್ಯರ ಹೊರತು ತಮ್ಮ ಮಕ್ಕಳಲ್ಲಿ ಯಾರೂ ಇಲ್ಲವೆಂಬದು ಅವರ ಅನುಭವಕ್ಕೆ ಬಂದಿರುವದು. ನಂತರ, ಅವರ ಸದಿಚ್ಛೆಗೆ ವಿಘ್ನವನ್ನುಂಟುಮಾಡಿ, ದೇಶವ ಹಾಳುಮಾಡತೊಡಗಿದ ನಿಮ್ಮ ವರ್ತನವು ಅತ್ಯಂತ ತಿರಸ್ಕರಣೀಯವಿರುವದು. ಚಂದ್ರಾದಿತ್ಯ-ಆದಿತ್ಯವರ್ಮರ ಸವಿ ಮಾತಿಗೆ ಮರುಳಾಗಿ, ರಾಜ್ಯಸಂಪಾದನೆ ಮಾಡಿಕೊಳ್ಳಬೇಕೆಂಬ ಉಬ್ಬಿನಿಂದ ಸಾಮ್ರಾಜ್ಯದ್ರೋಹಿಗಳಾಗುವದು ತೀರ ಅನುಚಿತವು. ನೀವು ಈ ಉದ್ಯೋಗದಲ್ಲಿ ಸ್ವಯಾಕಬಾರದೆಂದು ಹೇಳುತ್ತೇನೆ."

"ರೇವತಿ, ನೀನು ನನಗೆ ಉಪದೇಶಿಸಬೇಡ. ವಂಶಪರಂಪರವಾಗಿ ದಾಸ್ಯದಲ್ಲಿ ಕೊಳೆತ ನಮ್ಮ ಮನೆತನಕ್ಕೆ ರಾಜನಿಂದ ದೊರೆತದ್ದಾದರೂ ಏನಿರುವದು? ಈಗ ಅನಾಯಾಸವಾಗಿ ಮಂಡಲೇಶ್ವರನಾಗುವ ಪ್ರಸಂಗವು ಬಂದೊದಗಿರಲು, ಈ ಅಮೃತೋಪಮ ಸಂಧಿಯನ್ನು ನಾನು ವ್ಯರ್ಥವಾಗಗೊಡಲಾರೆನು."

"ನಿಮ್ಮ ಮನೋರಾಜ್ಯವು ನಿರರ್ಥಕವಾದದ್ದೆಂಬದು ಅನುಭವದ ಮೇಲಿಂದ ತಿಳಿದುಬರುವದು. ನಿಮ್ಮ ಸ್ವಾರ್ಥಲಾಲಸೆಯು ಕಟುತರವಾದ ಫಲಗಳನ್ನು ದೇಶಕ್ಕೆ ಬೇಗನೆ ಹೊಂದುವ ಪ್ರಸಂಗವು ಬರಬಹುದೆಂದು ವ್ಯಸನ ಪಡಬೇಕಾಗಿರುವದು."

"ಓಹೋ! ನೀನು ಹಳ್ಳಿಯ ದೇಶಭಕ್ತಳಿರುವಂತೆ ತೋರುವೆ. ದೇಶದ ಹಿತಕ್ಕಾಗಿ ಯಾರೂ ಸಾಯುತ್ತಿರುವದಿಲ್ಲ." ಎಂದು ಶಾಂತಿವರ್ಮನು ನಿರ್ಲಜ್ಜತನದಿಂದ ನುಡಿದು:—"ಪ್ರಿಯೆ, ನಾಳೆ ರೇವತಿದ್ವೀಪಕ್ಕೆ ಪಯಣಮಾಡುವದು ನಿಶ್ಚಿತವಾಗಿದೆ."

"ಅವಶ್ಯವಾಗಿ ಹೋಗಿರಿ. ನಾನು ಬೇಡವೆಂದರೆ ನನ್ನಮಾತು ನಡೆಯುವದಾದರೂ ಅಷ್ಟರಲ್ಲಿಯೇ ಇರುವದು."

"ಏನು? ನೀನು ಬರುವದಿಲ್ಲವೆ?"

"ಅಲ್ಲಿ ನನ್ನ ಕೆಲಸವೇನುಂಟು?"ಎಂದು ರೇವತಿಯು ನುಡಿದು, ತಿರಸ್ಕಾರ ದರ್ಶಕ ಸ್ವರದಿಂದ:— "ನಿಮ್ಮಂತಹ ದೇಶನಾಶಕರ ಅಕಾಂಡತಾಂಡವವನ್ನು ನೋಡಲಿಕ್ಕೆ ನಾನು ಪ್ರೇಕ್ಷಕಳಾಗಿರಬೇಕಾಗುವದೇನು?"

"ಏನು? ನೀನು ಬರುವದಿಲ್ಲವೆ!"

"ನಿಶ್ಚಯವಾಗಿಯೂ ಬರುವದಿಲ್ಲ."

"ನೀನು ನನ್ನೊಡನೆ ಈಗ ಬಾರದಿದ್ದರೆ ನಿಶ್ಚಯವಾಗಿ ನೀನು ಇಲ್ಲಿಯೇ ಇರಬೇಕಾದೀತು!" ಎಂದು ಶಾಂತಿವರ್ಮನು ಕ್ರೋಧೋನ್ಮತ್ತನಾಗಿ ನುಡಿಯಲು, ರೇವತಿಯು ತಿಲಾಂಶವಾದರೂ ಅಂಜದೆ, ಅಳುಕದೆ:—

"ನಾಥ, ರಾಜದ್ರೋಹಿಗಳೂ ದೇಶಹಿತವಿಘಾತಕಿಗಳಾದ ಸ್ವಾರ್ಥಿಗಳೂ ಆದ ಜನರ ಸಹವಾಸವು ಅತ್ಯಂತ ಹೀನವಾದದ್ದು. ಅಂತಹ ಜನರನ್ನು ನಾನು ವೈರಿಗಳಂತೆ ಭಾವಿಸುವೆನು."

"ನೀನು ಸಾಧ್ವಿಯೆ? ನನ್ನ ಸಹಧರ್ಮಚಾರಣಿಯೆ? ನೀನು ಕುಲಟೆಯು! ತಾಮಸೀಗುಣದ ಪತಿದ್ರೋಹಿಯು!"

"ನಾಥರೆ, ನೀವು ಮನಬಂದಂತೆ ನನ್ನನ್ನು ನಿಂದಿಸಿರಿ. ನನ್ನ ಹೃದಯದ ಪಡಿಕಟ್ಟನ್ನು ಹೃದಯಾಂತರ್ಗತ ಪರಮಾತ್ಮನೊಬ್ಬನೇ ತಿಳಿದಿರುವನು ನನ್ನ ವರ್ತನಕ್ಕೆ ಆ ಹೃದಯಸ್ಥ ದೇವತೆಯೇ ಸಾಕ್ಷಿಯಾಗಿರುವನು ನನ್ನ ಶೀಲಕ್ಕೆ ದೋಷವಿಡುವ ಅಧಿಕಾರವು ನಿಮ್ಮದಲ್ಲ. ನಾನು ಪತಿಧರ್ಮಕ್ಕಿಂತಲೂ ರಾಷ್ಟ್ರಧರ್ಮವೇ ಮಿಗಿಲಾದದ್ದೆಂದು ಭಾವಿಸಿರುವೆನು ನಿಮ್ಮ ದುಷ್ಟಲಾಲಸೆಯನ್ನು ತೃಪ್ತಿಪಡಿಸುವದಕ್ಕಾಗಿ ನನ್ನಿಂದ ನಿಮಗೆ ಯಾವ ರೀತಿಯಿಂದಲೂ ನೆರವು ದೊರೆಯಲಾರದು ಇಷ್ಟಲ್ಲದೆ ನಿಮ್ಮ ಕಾರಸ್ಥಾನಗಳನ್ನು ಬೈಲಿಗೆಳೆದು ದೇಶದ್ರೋಹಿಗಳ ಇತ್ಯರ್ಥವನ್ನು ಕಾಣುವದಕ್ಕಾಗಿ ಕೈಲಾದಷ್ಟು ಮಹಾರಾಜರಿಗೆ ಸಹಾಯ ಮಾಡುವೆನು ನಿಮ್ಮಂತಹ ನೀಚಮನೋವೃತ್ತಿಯವರನ್ನು ಪತಿಯೆಂದು ಭಾವಿಸಲಿಕ್ಕೆ ನನ್ನ ರಾಷ್ಟ್ರಾಭಿಮಾನಿಯಾದ ಮನಸ್ಸು ಹೇಸಿಕೊಳ್ಳುತ್ತಲಿದೆ. ನಾಥರೆ, ಮತ್ತೂ ಹೇಳುವೆನು; ಇಂತಹ ದುರ್ವಿಚಾರಗಳನ್ನು ಬಿಡಿರಿ!"

'ನಿನ್ನನ್ನೇ ಬಿಡುವೆನಲ್ಲದೆ, ನನ್ನ ನಿಶ್ಚಯವನ್ನು ಬಿಡಲಾರೆನು'

"ಧಿಃಕಾರವಿರಲಿ, ನಿಮ್ಮ ಜೀವಿತಕ್ಕೆ!" ಎಂದು ರೇವತಿಯು ಸಂತಾಪದಿಂದ ನುಡಿದಳು: "ನಿಮ್ಮ ಸ್ವಾರ್ಥಿಜೀವನವು ರಾಜಸಿಂಹಾಸನದ ಪ್ರಾಪ್ತಿಗಾಗಿ ಆತುರಗೊಂಡಿರುವದಲ್ಲವೆ? ಅದಕ್ಕಾಗಿಯೆ ನೀವು ಘೋರತರ ಕೃತಿಯನ್ನಾಚರಿಸಲು ಸಿದ್ಧರಾಗಿರುವಿರಲ್ಲವೆ? ಧಿಃಕಾರವಿರಲಿ! ನಿಮ್ಮ ಜೀವಿತಕ್ಕೆ! ಅನ್ನದಾತನ ದ್ರೋಹಚಿಂತನೆಗಾಗಿ—ಜನ್ಮದಾತ್ರಿಯಾದ ಕರ್ನಾಟಕ ಮಾತೃಭೂಮಿಯ ಅಹಿತ ಮಾಡುವದಕ್ಕಾಗಿ—ಸಿದ್ಧರಾದ ನಿಮ್ಮನ್ನು ಎಷ್ಟು ನಿಂದಿಸಿದರೂ ಸ್ವಲ್ಪವೇ

ಇರುವದು. ಹೊತ್ತಿ ತೊಡಗಿರುವ ಗೃಹಕಲಹಾಗ್ನಿಯಲ್ಲಿ ಎಣ್ಣೆಯನ್ನು ಎರಚಿ, ಅದನ್ನು ಮತ್ತಿಷ್ಟು ಪ್ರಜ್ವಲಗೊಳಿಸಿ, ಕೌತ್ಯಶಮನ ಮಾಡಿಕೊಳ್ಳುವ ನಿಮ್ಮಂತಹ ಕ್ಷುದ್ರವೃತ್ತಿಯವರು ನಿಜವಾಗಿಯೂ ಭೂಮಿಗೆ ಭಾರವೇ ಸರಿ! ನೀವು ಪ್ರತಾಪವರ್ಮರ ನಿರ್ಮಲವಾದ ಕೀರ್ತಿಗೆ ಕಲಂಕಪ್ರಾಯರಾದಿರಿ ನಿಮ್ಮಂತಹರಿಗೆ ಜನ್ಮವಿತ್ತ ನಿಮ್ಮ ಜನನಿಯು ವ್ಯರ್ಥವಾಗಿ ದಣಿದಳು ನಿಮ್ಮ ಮುಖಾವಲೋಕನವು ಸಹ ಮಹತ್ಪಾಪದಾಯಕವೆಂದು ನನಗೆ ತೋರಲಾರಂಭಿಸಿರುವದು!''

ರೇವತಿಯು ಕ್ಷುಬ್ಧಳಾಗಿ ಹೀಗೆ ನುಡಿದು, ಅಲ್ಲಿಂದೆದ್ದು ಬೇರೆ ಕಡೆಗೆ ತೆರಳಿದಳು. ಶಾಂತಿವರ್ಮನು ಅವಳ ವಾಕ್ಪ್ರಹಾರದಿಂದ ಬಹಳವಾಗಿ ಕ್ರೋಧಗೊಂಡನು. ಪತ್ನಿಯ ವಿಷಯವಾಗಿ ಅವನಲ್ಲಿ ನೆಲೆಗೊಂಡಿದ್ದ ಪ್ರೇಮವು ಸಮೂಲವಾಗಿ ನಾಶವಾಯಿತು ಕೂಡಲೆ ಅವನು ಆಗಿಂದಾಗ ರೇವತಿದ್ವೀಪಕ್ಕೆ ಪ್ರಯಾಣ ಮಾಡಲು ಸಿದ್ಧನಾದನು.

ಶಾಂತಿವರ್ಮನು ತನ್ನ ಅನುಚರರೊಂದಿಗೆ ವಾತಾಪಿಪುರದಿಂದ ಹೊರಡಲನುವಾಗಿ ರಾಜಧಾನಿಯ ಮಹಾದ್ವಾರದ ಬಳಿಗೆ ಬಂದನು. ಆಗ ಅವನಿಗೆ ''ಧಿಕ್ಕಾರವಿರಲಿ, ನಿಮ್ಮ ಜೀವಿತಕ್ಕೆ!'' ಎಂಬ ಧ್ವನಿಯು ಮತ್ತೆ ಕೇಳಿಸಿತು ಹಿಂತಿರುಗಿ ನೋಡಿದನು; ಯಾರೂ ದೃಷ್ಟಿಗೆ ಬೀಳಲಿಲ್ಲ. ಅವನು ಧ್ವನಿಯನ್ನು ಗುರತಿಸಿದನು. ಪತಿದ್ರೋಹಿಯಾದ ತನ್ನ ಪತ್ನಿಯೇ ಹೀಗೆ ಮಾತನಾಡಿದಳೆಂದು ತಿಳಿದು, ಅವಳನ್ನು ಹುಡುಕಿದನು. ಬಹಳ ಹೊತ್ತು ಶೋಧಿಸಿದರೂ ಉಪಯೋಗವಾಗಲಿಲ್ಲ ಆಗ ಅವನು ಅಲ್ಲಿಂದ ರೇವತಿದ್ವೀಪದ ಮಾರ್ಗವನ್ನು ಹಿಡಿದು, ವೇಗದಿಂದ ಸಾಗಿದನು.



## ರೇವತಿದ್ವೀಪಕ್ಕೆ ಪಯಣ.

ಪ್ರೌಢಪ್ರತಾಪಸಿಧಿಯಾದ ಪುಲಿಕೇಶಿಯು ರಾಜ್ಯಲೋಭಿಯಾದ ಮಂಗಳೇಶನಿಂದ ರಾಜ್ಯವನ್ನು ಕಿತ್ತುಕೊಂಡು, ಎಡೆಬಿಡದೆ ಅನೇಕ ವಿಜಯಯಾತ್ರೆಗಳನ್ನು ಮಾಡಿ, ಕರ್ನಾಟಕ ಸಾಮ್ರಾಜ್ಯದ ಕೀರ್ತಿಯನ್ನು ಜಗತ್ತಿನಲ್ಲೆಲ್ಲ ಹಬ್ಬಿಸಿದನು. ಈ ಸಮ್ರಾಟನ ಶೌರ್ಯ, ಧೈರ್ಯ, ಸಾಹಸ, ಉದಾರತನ, ಜನರಂಜನಬುದ್ಧಿ ಮೊದಲಾದ ಸದ್ಗುಣಗಳನ್ನು ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಪ್ರಕಟಿಸಬಹುದಾಗಿದೆ! ಮಹಾನುಭಾವನಾದ ಪುಲಿಕೇಶಿ ಸಾರ್ವಭೌಮನು ನಾಲ್ವತ್ತೆರಡು ವರ್ಷಗಳವರೆಗೆ ಅತಿ ವೈಭವದಿಂದ ರಾಜ್ಯವಾಳಿದನು. ವಾಯುವ್ಯದಲ್ಲಿ ಕೋಶಲದ ಅರಸನೂ, ದಕ್ಷಿಣದಲ್ಲಿ ಚೇರ, ಚೋಳ, ಪಾಂಡ್ಯ, ಗಂಗರಸರೂ ಅವನ ಮಾಂಡಲಿಕತ್ವವನ್ನು ವಹಿಸಿ, ಸ್ನೇಹದಿಂದ ತಮ್ಮ ರಾಜ್ಯವನ್ನಾಳುತ್ತಿದ್ದರು. ಕಂಚಿಯ ಪಲ್ಲವರು ಚನ್ನಾಗಿ ಪೆಟ್ಟು ತಿಂದಿದ್ದರೂ, ಹೆಡೆ ತುಳಿದ ಹಾವಿನಂತೆ ಫೂತ್ಕಾರ ಮಾಡತೊಡಗಿದ್ದರು. ಮಧ್ಯಪ್ರಾಂತ, ಗುಜರಾಥ, ಮಾಳವ, ಲಾಟ, ವರ್ಹಾಡ, ಖಾನದೇಶ, ನಾಶಿಕ, ಹೈದರಾಬಾದ, ಕುಂತಳ, ಸಾವಂತವಾಡಿ, ಕೊಂಕಣ, ಬನವಾಸಿ ಮೊದಲಾದ ಪ್ರಾಂತಗಳ ಮಂಡಲೇಶ್ವರರು ಕೈ ಕಟ್ಟಿಕೊಂಡು ಅವನ ಆಜ್ಞೆಯನ್ನು ಮಹಾಪ್ರಸಾದವೆಂದು ಪಾಲಿಸುತ್ತಿದ್ದರು ನೂರಾರು ಕಾಳಗಗಳಲ್ಲಿ ತಿಂದ ಕಡತಗಳಿಂದ ಮೆರೆಯುವ ನುರಿತ ಸಾವಿರಾರು ದಂಡಾಳುಗಳೂ, ದೇವೇಂದ್ರನ ಐರಾವತವನ್ನು ಹೋಲುವ ನೂರಾರು ಸೊಕ್ಕಿದ ಆನೆಗಳೂ, ವಾಯುವೇಗದಿಂದ ಹೋಗುವ ಸಾವಿರಾರು ಕುದುರೆಗಳೂ, ತಪ್ಪದೆ ಗುರಿ ಹೊಡೆಯುವ ಸಹಸ್ರಾವಧಿ ಬಿಲ್ಲುಗಾರರೂ, ಸೇನಾರಚನೆಯಲ್ಲಿಯೂ ದಂಡಿಸವರನ್ನು ಹುರಿದುಂಬಿಸುವದರಲ್ಲಿಯೂ ಸಾಹಸ ಕಾರ್ಯಗಳಲ್ಲಿಯೂ ಎದೆಗಾರಿಕೆಯಲ್ಲಿಯೂ ಹಗೆಗಳು ಹೊಯ್ದಾಡುವ ಸಂಧಿಯನ್ನು ಕಂಡು ಹಿಡಿದು ಬಲು ಹುರುಪಿನಿಂದ

ನುಗ್ಗಿ ಶತ್ರುಗಳನ್ನು ಕಂಗೆಡಿಸುವದರಲ್ಲಿಯೂ ಚತುರರಾದ, ಹತ್ತಿ ಪ್ಪತ್ತು ಮಂದಿ ಮಹಾರಥಿಕರಾದ ದಳವಾಯಿಗಳು ಅವನ ದಂಡಿ ನಲ್ಲಿ ಬೇಸಿಗೆಯ ಕಾಲದ ಅಮಾವಾಸ್ಯೆಯ ರಾತ್ರಿಯಲ್ಲಿ ಬೆಳಗುವ ಚಿಕ್ಕೆಗಳಂತೆ ಹೊಳೆಯುತ್ತಿದ್ದರು. ರಾಜನೀತಿ ವಿಶಾರದರೂ, ಧರ್ಮ ಶಾಸ್ತ್ರಜ್ಞರೂ, ವ್ಯವಹಾರಜ್ಞರೂ, ಪಾಪಭೀರುಗಳೂ, ಕಾರ್ಯ ದಕ್ಷರೂ ಆದ ಸಾವಿರಾರು ಮಂದಿ ರಾಜಾಧಿಕಾರಿಗಳು ಇಡಿಯ ರಾಜ್ಯಕ್ಕೆ ಸೇರಿದ ಎಲ್ಲ ಪ್ರಜೆಗಳ ಯೋಗಕ್ಷೇಮವನ್ನು ನೋಡಿ ಅವ ರನ್ನು ಸುಖದಿಂದ ಪಾಲಿಸುತ್ತಿದ್ದರು ಹಟ್ಟನ ಮೇಲೆ ಪುಲಿಕೇಶಿ ಸಾರ್ವಭೌಮನ ಕರ್ನಾಟಕ ಸಾಮ್ರಾಜ್ಯ ವೈಭವವು ಉನ್ನತ ಶಿಖ ರಕ್ಕೆ ಮುಟ್ಟಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಈ ಸಾರ್ವ ಭೌಮನು ಅಶ್ವಮೇಧಯಾಗವನ್ನು ಮಾಡಿ ತನ್ನ ಸಂಗ್ರಾಮ ಮಹಾ ಧುರೀಣತೆಯನ್ನು ಮತ್ತಿಷ್ಟು ಹೆಚ್ಚಾಗಿ ಪ್ರಕಟಗೊಳಿಸಿದನು ಇವನ ಕೀರ್ತಿಯು ನಳ ನಹುಷ ಮಾಂಧಾತಾದಿ ರಾಯರುಗಳ ಕೀರ್ತಿಗೆ ಸರಿಗಟ್ಟುವಂತಾಯಿತೆಂದು ನಿರ್ಬಾಧಕವಾಗಿ ಹೇಳಬಹುದು.

ಕಂಚಿಯ ಕದನದಲ್ಲಿ ವಿಜಯಶಾಲಿಯಾಗಿ ತನ್ನ ವಿಜಯ ದುಂದುಭಿಯನ್ನು ಮೊಳಗಿಸುತ್ತ ಪುಲಿಕೇಶಿಸಾರ್ವಭೌಮನು ವಾತಾ ಪಿಪುರಕ್ಕೆ ಬಂದನು. ಅಷ್ಟರಲ್ಲಿ ವೆಂಗಿಯ ರಾಜನಾದ ಕುಬ್ಜ ವಿಷ್ಣು ವರ್ಧನನು ಸ್ವತಂತ್ರನಾಗಲಿಕ್ಕೆ ಮತ್ತೆ ಹವಣಿಸತೊಡಗಿರುವನೆಂಬ ಸಂಗತಿಯು ಅವನಿಗೆ ತಿಳಿಯಿತು. ಅವನನ್ನು ಪರಾಜಯಗೊಳಿಸಿ ಉನ್ಮತ್ತತನಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸುವದು ಪುಲಿಕೇಶಿಗೆ ಅಸಾಧ್ಯವಾದದ್ದಾಗಿರದಿದ್ದರೂ, ಬಂಧು-ಬಾಂಧವರಲ್ಲಿ ಸದೈವ ಜಾಗ್ರತವಾಗಿರುತ್ತಿದ್ದ ಸದಸದ್ವಿವೇಕಬುದ್ಧಿಯು ಅವನನ್ನು ಹಾಗೆ ಮಾಡಗೊಡಲಿಲ್ಲ. ಅವನು ಬಂಧುವಾತ್ಸಲ್ಯದಿಂದ ವೆಂಗಿ ನಾಡಿನ ಪೂರ್ಣಸ್ವಾತಂತ್ರ್ಯವನ್ನು ಅವನಿಗಿತ್ತು, ಅವನು ತನಗೆ ಅನುಕೂಲ ವಾಗಿರುವಂತೆ ಮಾಡಿಕೊಂಡನು.

ಸಾಮ್ರಾಜ್ಯದಲ್ಲಿ ಎಲ್ಲ ಕಡೆಯಲ್ಲಿಯೂ ಶಾಂತಿ-ಸೌಖ್ಯಗಳು

ನೆಲೆಗೊಂಡ ಕೂಡಲೆ ಪುಲಿಕೇಶಿಯು ಅಂತರ್ವ್ಯವಸ್ಥೆಯಲ್ಲಿ ಕೈ ಹಾಕಿದನು. ಪ್ರತಾಪವರ್ಮನು ತೀರ ವೃದ್ಧಾಪ್ಯಕ್ಕೊಳಗಾದ್ದರಿಂದ, ಅವನ ಸ್ಥಳದಲ್ಲಿ ಅವನ ಪುತ್ರನಾದ ಶಾಂತಿವರ್ಮನನ್ನು ನಿಯಮಿಸಬೇಕೆಂದು ಅವನು ಯೋಚಿಸಿಕೊಂಡಿದ್ದನು. ಶಾಂತಿವರ್ಮನು ರೇವತಿದ್ವೀಪಕ್ಕೆ ಹೋದವನು ಇದುವರೆಗೆ ತಿರುಗಿ ಬಾರದಿರುವ ಕಾರಣವು ಅವನಿಗಿನ್ನೂ ತಿಳಿದಿರಲಿಲ್ಲ ಅವನು ತನ್ನ ಪ್ರಿಯಪತ್ನಿಯಾದ ರೇವತಿದೇವಿಯನ್ನು ರಾಜಧಾನಿಯಲ್ಲಿಯೇ ಬಿಟ್ಟು ಹೋದದ್ದರಿಂದ ಬೇಗನೆ ತಿರುಗಿ ಬರಬಹುದೆಂದು ನಾಲ್ಕಾರು ತಿಂಗಳುಗಳ ವರೆಗೆ ಮಾರ್ಗ ಪ್ರತೀಕ್ಷೆ ಮಾಡಿದನು. ಕಡೆಗೆ ಅವನು ಶಾಂತಿವರ್ಮನನ್ನು ಕರೆತರುವದಕ್ಕಾಗಿ ರೇವತಿದ್ವೀಪಕ್ಕೆ ಚಾರರನ್ನು ಸಹಕಳುಹಿಸಿದನು. ಚರರು ರೇವತಿದ್ವೀಪವನ್ನು ಮುಟ್ಟಿ ಹಾಗೇ ತಿರುಗಿ ಬರಬೇಕಾಯಿತು. "ವಾತಾಪಿಪುರಕ್ಕೆ ಕೊನೆಯ ನಮಸ್ಕಾರವನ್ನರ್ಪಿಸಿ ಹೊರಟಿರುವೆವೆಂದೂ, ಸತ್ಪಕ್ಷಕ್ಕೆ ರಾಜ್ಯವು ದೊರೆಯುವವರೆಗೆ ರಾಜಧಾನಿಯನ್ನು ಪ್ರವೇಶಿಸುವದಿಲ್ಲವೆಂದೂ" ಶಾಂತಿವರ್ಮನು ಪುಲಿಕೇಶಿಗೆ ನಿರೋಪ ಕಳುಹಿಸಿದನು

ಶಾಂತಿವರ್ಮನ ನಿರೋಪವನ್ನು ಕೇಳಿ ಪುಲಿಕೇಶಿಯು ಸೋಜಿಗಗೊಂಡನು. ಅವನು ವಾತಾಪಿಪುರಕ್ಕೆ ಕೊನೆಯ ನಮಸ್ಕಾರವನ್ನೇಕೆ ಅರ್ಪಿಸಿರಬಹುದು? ಸತ್ಪಕ್ಷಕ್ಕೆ ರಾಜ್ಯವು ದೊರೆಯುವದೆಂದರೇನು? ಈಗ ನನ್ನ ವಶದಲ್ಲಿ ರಾಜ್ಯವಿರುವದು ಅವನ ಮನಸ್ಸಿಗೆ ಬಂದಿರಲಿಕ್ಕಿಲ್ಲವೇನು? ರಾಜ್ಯಾಧಿಕಾರಿಗಳು ಯಾರಾಗಬೇಕೆಂದು ಅವನ ಮನೀಷೆಯಿರಬಹುದು? ಮೊದಲಾದ ಆಲೋಚನೆಗಳಿಂದ ಅವನ ಮನಸ್ಸು ಬಹಳೇ ಚಿಂತೆಗೊಳಗಾಯಿತು. ರೇವತಿಯು ಅವನೊಡನೆ ಹೊರಡದ್ದರಿಂದ ಅವಳ ಮೇಲೆ ಕ್ರೋಧಗೊಂಡವನಾಗಿ ಶಾಂತಿವರ್ಮನು ಹೀಗೆ ನಿರೋಪ ಕಳುಹಿಸಿರಬಹುದೆಂದು ಅವನು ಮೊದಲನೆಯ ಮಾತಿನ ಅರ್ಥ ಮಾಡಿಕೊಂಡನು. ಸತ್ಪಕ್ಷಕ್ಕೇ ರಾಜ್ಯವು ದೊರೆಯಬೇಕೆಂಬ ಮಾತಿನ ಆಶಯವು ಅವನಿಗೆ ತಿಳಿಯ

ಲಿಲ್ಲ. ಈ ಮಾತಿನ ನಿಷ್ಕರ್ಷೆಯು ಹೇಗಾದೀತೆಂದು ಅವನು ಬಹು ವಿಧವಾಗಿ ವಿಚಾರಿಸಿ, ಮಂತ್ರಿಯಾದ ವೀರಸೇನನನ್ನೂ, ಸೇನಾಪತಿಯಾದ ಪ್ರತಾಪವರ್ಮನನ್ನೂ ಕರೆಯಿಸಿದನು. ಈ ಪ್ರಕರಣದಲ್ಲಿ ರೇವತಿಯಿಂದಲಾದರೂ ಉಪಯೋಗಬೀಳಬಹುದೆಂದು ಪುಲಿಕೇಶಿಯು ಅವಳನ್ನೂ ಬರಮಾಡಿಕೊಂಡನು.

“ಸೇನಾಪತಿಗಳೆ, ನಿಮ್ಮ ಪುತ್ರರಾದ ಶಾಂತಿವರ್ಮರು ಬಹಳೇ ಬುದ್ಧಿಶಾಲಿಗಳಿರುವಂತೆ ತೋರುವದು” ಎಂದೆಂದು, ಪುಲಿಕೇಶಿಯು ಅವನು ಹೇಳಿ ಕಳುಹಿದ ವಾರ್ತೆಯನ್ನು ಅವನಿಗೆ ತಿಳಿಸಿದನು.

ಪುಲಿಕೇಶಿಯ ಮಾತುಗಳನ್ನು ಕೇಳಿ ಪ್ರತಾಪವರ್ಮನು ಖಿನ್ನನಾದನು. ಒಬ್ಬನೇ ಒಬ್ಬನಾದ ಮಗನು ತನ್ನ ನಿರ್ಮಲವಾದ ಕೀರ್ತಿಗೆ ಕಲಂಕವನ್ನುಂಟು ಮಾಡತೊಡಗಿರುವನೆಂದು ಅವನು ದುಃಖಿಸತೊಡಗಿದನು. ಕೆಲವು ದಿನಗಳ ವರೆಗೆ ಕೇವಲ ವಿಲಾಸದಲ್ಲಿಯೇ ಕಾಲಹರಣ ಮಾಡುತ್ತಿದ್ದ ಮಗನು, ಈಗೀಗ ಮಾರ್ಗಕ್ಕೆ ಹತ್ತಿದನೆಂದು ಸಮಾಧಾನಬಡುವಷ್ಟರಲ್ಲಿ ಮತ್ತೆ ಅಡ್ಡದಾರಿಯನ್ನು ಹಿಡಿದ ಬಗ್ಗೆ ಅವನಿಗೆ ಬಹಳೇ ಹಳಹಳಿಯಾಯಿತು. ಸಾಮ್ರಾಜ್ಯದ ಮುಖ್ಯ ಸೇನಾಧಿಪತ್ಯವನ್ನು ವಹಿಸಿ ಅನೇಕ ವಿಧವಾಗಿ ಪರಾಕ್ರಮದ ಕಾರ್ಯಗಳನ್ನು ಮಾಡುತ್ತ ಅವನು ಸಂತೋಷಬಡುವನೆಂದು ಪ್ರತಾಪವರ್ಮನು ಮನೋರಾಜ್ಯವನ್ನು ಕಲ್ಪಿಸಿದ್ದನು. ಅದೀಗ ಮೃಗಜಲದಂತೆ ಮಾಯವಾಗಿ ಸಾರ್ದ್ರವಾದ ಅವನ ಮನೋಭೂಮಿಕೆಯು ಮರುಭೂಮಿಗಿಂತಲೂ ನಿರಾರ್ದ್ರವಾಯಿತು. ಮಗನು ಅಡವಿಪಾಲಾದನೆಂದು ಅವನು ಗ್ರಹಿಸಿದನು. ಆಗ ಅವನು ನಿಟ್ಟುಸಿರುಬಿಡುತ್ತ:—

‘ಮಹಾರಾಜರೆ, ಈಶ ಸಂಕಲ್ಪವಿದು!”

“ಈಶಸಂಕಲ್ಪವಲ್ಲದಿದ್ದರೆ ಮತ್ತೇನು? ಸಾಮ್ರಾಜ್ಯದ ಸೇನಾಪತಿಯ ಅಧಿಕಾರವನ್ನು ಪಡೆದು ಕೀರ್ತಿಯುತನಾಗುವ ಸಂಧಿಯನ್ನು ಯಾವ ಕ್ಷತ್ರಿಯು ವ್ಯರ್ಥವಾಗಗೊಡುವನು? ಅದರಲ್ಲಿ ನಿಮ್ಮಂತಹ ನರಕೇಸರಿಗಳ ಪುತ್ರನು ಹೀಗೆ ಕರ್ತವ್ಯಹೀನನಾಗಬೇಕೆ? ಸಿಂಹನ

ಉದರದಲ್ಲಿ ಜಂಬೂಕವು ಸೃಜಿಸುವದೆಂದರೆ, ಇದಕ್ಕೆ ಈಶ ಸಂಕಲ್ಪ ವಲ್ಲದೆ ಮತ್ತೇನೆನ್ನಬೇಕು?" ಎಂದು ವೀರಸೇನನು ನುಡಿಯಲು, ಪುಲಿಕೇಶಿಯು:—

"ಅವನು ವಾತಾಪಿಪುರಕ್ಕೆ ಕೊನೆಯ ನಮಸ್ಕಾರವನ್ನರ್ಪಿ ಸಲಿಕ್ಕೆ ಅಂತಹ ಕಾರಣವೇನು ಘಟಿಸಿರಬಹುದು? ಅವನು ಈ ಬಗೆಯ ಸಂದೇಶ ಕಳುಹಿಸಿದ್ದನ್ನು ನೋಡಿದರೆ, ಅವನ ಕ್ರೋಧದ ಕಾರಣವು ರೇವತಿಯೇ ಎಂದು ನನ್ನ ತಿಳುವಳಿಕೆಯಾಗಿರುವದು."

"ಮಹಾರಾಜರೆ, ಅದು ಹೇಗೆ? ನೀವು ನನ್ನ ಮೇಲೆ ವೃಥಾ ದೋಷವಿಡಲಾಗದು"

"ನಾನು ವೃಥಾದೋಷವಿಡುವದಿಲ್ಲ" ಎಂದು ಪುಲಿಕೇಶಿ ಯು ನುಡಿದು, ನಗುತ್ತ:—"ನೀನು ಪತಿಯೊಡನೆ ರೇವತಿದ್ವೀಪಕ್ಕೆ ಹೋಗಿದ್ದರಿಂದ, ಅವನು ನಿನ್ನಲ್ಲಿ ಸಂತಪ್ತನಾಗಿರುವನೆಂದು ನಾನು ಊಹಿಸುತ್ತೇನೆ."

ಪುಲಿಕೇಶಿಯು ಹೀಗೆ ನುಡಿದಕೂಡಲೆ ರೇವತಿಯ ಮನಸ್ಸು ಚಂಚಲವಾಯಿತು. ಪತಿಯು ಪುರತ್ಯಾಗ ಮಾಡಿದ್ದರ ನಿಜವಾದ ಕಾರಣವನ್ನು ತಿಳಿಸದಿದ್ದರೆ, ಅಪರಾಧವು ತನ್ನ ಮೇಲೆ ಪ್ರಸ್ಥಾಪಿತ ವಾಗುವದೆಂದು ಅವಳು ಬಗೆದಳು. ಆಗ ಅವಳು ಪುಲಿಕೇಶಿಯನ್ನು ಕುರಿತು:

"ಮಹಾರಾಜರೆ, ನನ್ನ ಪತಿಯು ವಾತಾಪಿಪುರಕ್ಕೆ ಎರವಾಗಲು ನಾನೇ ಕಾರಣಳೆಂಬದನ್ನು ನೀವು ಹೇಗೆ ತಿಳಿದಿರಿ?"ಎಂದು ರೇವತಿಯು ನುಡಿದು, ಅಂಜುತ್ತಂಜುತ್ತ:—"ಅವರು ಪುರತ್ಯಾಗ ಮಾಡಿದ ಕಾರ ಣವು ಅತ್ಯಂತ ಮಹತ್ವದ್ದಿರುವದು."

"ಅದೇನು?" ಎಂದು ಉತ್ಕಂಠತೆಯಿಂದ ಪುಲಿಕೇಶಿಯು ಕೇಳಿ ದನು.

"ಮಹಾರಾಜರೆ, ಇಷ್ಟು ದಿವಸಗಳ ವರೆಗೆ ಬಚ್ಚಿಟ್ಟ ಸಂಗತಿ ಯನ್ನು ಇಂದು ಅಪರಿಹಾರ್ಯ ಕಾರಣದ ಮೂಲಕ ಹೇಳಬೇಕಾ

ಯಿತು. ಈಗ ನನ್ನ ಪತಿಗಳು ಗೃಹಕಲಹದ ಬೇಗೆಯನ್ನೆಬ್ಬಿಸುವದಕ್ಕಾಗಿ ಹೋಗಿರುವರು!"

"ರೇವತಿ, ನೀನು ಇದೇನು ಹೇಳುವೆ? ಏನಾದರೊಂದು ಹೇಳಿ ಮನಸ್ಸಿನ ಸಮಾಧಾನ ಮಾಡಲುಪಕ್ರಮಿಸಬೇಡ. ಸತ್ಯವಾದ ಸಂಗತಿಯನ್ನು ಮಹಾರಾಜರ ಮುಂದೆ ತಿಳಿಸು" ಎಂದು ವೀರಸೇನನು ನುಡಿಯಲು, ಅಲ್ಲಿಯೇ ಕುಳಿತ ವಿಕ್ರಮಾದಿತ್ಯನು:—

"ರೇವತಿದೇವಿಯವರ ಮಾತಿನಲ್ಲಿ ಮಿಥ್ಯಾಂಶವಿಲ್ಲೆಂದು ನನ್ನ ಗ್ರಹಿಕೆಯುಂಟು. ಇಷ್ಟು ದಿನಗಳ ವರೆಗೆ ನನ್ನ ಮನಸ್ಸಿನಲ್ಲಿ ಯಾವ ಸಂಶಯವು ಬಾಧಿಸುತ್ತಿತ್ತೋ, ಅದಕ್ಕೆ ಶಾಬ್ದಿಕಪ್ರಮಾಣಗಳಿದ್ದಿಲ್ಲವೆಂದು ನಾನು ತಟಸ್ಥವೃತ್ತಿಯಿಂದಿದ್ದೆನು. ರೇವತಿದೇವಿಯವರು ನನ್ನ ಮನಸ್ಸಿನೊಳಗಿನ ಸಂಶಯದ ವಿಷಯವನ್ನು ಚನ್ನಾಗಿ ನಿದರ್ಶನಕ್ಕೆ ತಂದುಕೊಂಡಿರುವಂತೆ ತೋರುವದು." ಎಂದು ಪುಲಿಕೇಶಿಗೆ ಹೇಳಿ, ಅವನು ರೇವತಿದೇವಿಯನ್ನು ಕುರಿತು:—

"ದೇವಿ, ಹೇಳಿರಿ, ಅಂಜದೆ ನಿಮಗೆ ಗೊತ್ತಿದ್ದ ಸಂಗತಿಯನ್ನು ವಿಶದವಾಗಿ ಹೇಳಿರಿ. ನಿಸ್ಪೃಹಿಗಳಾದ ಜನರು ವಸ್ತುಸ್ಥಿತಿಯನ್ನು ನಿವೇದಿಸುವದಕ್ಕೆ ಎಂದೂ ಹಿಂದೆ ಮುಂದೆ ನೋಡಬಾರದು."

"ಕುಮಾರ ವಿಕ್ರಮಾದಿತ್ಯರೆ, ನನಗೆ ಗೊತ್ತಿದ್ದ ಸಂಗತಿಯನ್ನು ತಿಳಿಸದಿದ್ದರೆ, ನಾನು ರಾಷ್ಟ್ರದ್ರೋಹಿಯಾಗಬಹುದು"ಎಂದು ರೇವತಿಯು ನುಡಿದು, ಪುಲಿಕೇಶಿಯನ್ನು ಕುರಿತು:—"ಆದಿತ್ಯವರ್ಮ-ಚಂದ್ರಾದಿತ್ಯರು ಗೃಹಕಲಹದ ಬೇಗೆಯನ್ನು ಹೊತ್ತಿಸಬೇಕೆಂದಿರುವರು. ಅವರು ಎಬ್ಬಿಸುವ ಬೇಗೆಗೆ ಎಣ್ಣೆ ಎಂಚಿ, ಅದೇ ಉರಿಯಿಂದ ಶೈತ್ಯನಿವಾರಣೆ ಮಾಡಿಕೊಳ್ಳಬೇಕೆಂದು ನನ್ನ ಪತಿಗಳ ಮನೀಷೆಯಿರುವದು."

"ರೇವತಿ, ಆದಿತ್ಯವರ್ಮ-ಚಂದ್ರಾದಿತ್ಯರು ಗೃಹಕಲಹವನ್ನೆಬ್ಬಿಸತಕ್ಕವರೆ? ಶಾಂತಿವರ್ಮನು ಅವರಿಗೆ ಸಹಾಯ ಮಾಡುವದಕ್ಕಾಗಿ ಹೊರಟಿರುವನೆ?"

"ಹೌದು, ನಿಜಸ್ಥಿತಿಯು ಹೀಗೆಯೇ ಇರುವದು ವಿಕ್ರಮಾದಿತ್ಯರು ಸಾಮ್ರಾಜ್ಯದ ಭಾವೀ ಸಮ್ರಾಟರೆಂದು ಮಹಾರಾಜರು ಪ್ರಸಿದ್ಧಪಡಿಸಿರುವರಷ್ಟೇ; ಈ ಮಾತು ಆದಿತ್ಯವರ್ಮ-ಚಂದ್ರಾದಿತ್ಯರಿಗೆ ಸಂದೇಹದಾಗಿದೆ. ಕುಮಾರ ವಿಕ್ರಮಾದಿತ್ಯರನ್ನು ನಾಶಗೊಳಿಸಿ, ಸಾಮ್ರಾಜ್ಯವನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳಬೇಕೆಂದು ಅವರ ದೀರ್ಘ ಸಾಹಸವಿರುವದು. ಅವರಿಗೆ ಈ ಕಾರ್ಯದಲ್ಲಿ ನೆರವಾಗಿ, ಒಂದು ಪ್ರಾಂತದ ಒಡೆತನವನ್ನು ಸಂಪಾದಿಸಿಕೊಳ್ಳಬೇಕೆಂಬ ಇಚ್ಛೆಯಿಂದ ನನ್ನ ಪತಿಗಳು ರಾಜಧಾನಿಯನ್ನು ತೊಲಗಿ ಹೋಗಿರುವರು. ಅವರ ಮಾತಿನೊಳಗಿನ ಎರಡು ಭಾವಗಳಲ್ಲಿ ಒಂದು ನನಗೆ ಸಂಬಂಧಿಸಿದ್ದು; ಎರಡನೆಯದು ತಮ್ಮ ವಿಷಯವಾಗಿರುವದು ರಾಜಧಾನಿಗೆ ಕೊನೆಯ ನಮಸ್ಕಾರವೆಂದರೆ, ಅವರು ನನ್ನನ್ನು ಧಿಃಕರಿಸಿರುವೆವೆಂದು ಹೇಳಿದಂತಾಯಿತು; ಆದಿತ್ಯವರ್ಮ-ಚಂದ್ರಾದಿತ್ಯರ ಪಕ್ಷವೇ ಸತ್ಪಕ್ಷವೆಂದು ಅವರ ಗ್ರಹಿಕೆಯಾದ ಕಾರಣ, ಅವರ ಪಕ್ಷಕ್ಕೆ ರಾಜ್ಯ ದೊರೆಯುವಂತೆ ಮಾಡುವದು ಉಚಿತವೆಂದು ನನ್ನ ಪತಿದೇವರು ತಮಗೆ ಬೋಧಿಸಿರುವರು" ಎಂದು ರೇವತಿಯು ಪುಲಿಕೇಶಿಯನ್ನು ಕುರಿತು ನುಡಿದಳು. ಆಗ ವಿಕ್ರಮಾದಿತ್ಯನು ಪುಲಿಕೇಶಿಯನ್ನು ಕುರಿತು:—"ನನಗೆ ಈ ವಿಷಯವಾಗಿ ಅಲ್ಪ ಸ್ವಲ್ಪ ಸಂಗತಿಯು ಈ ಮೊದಲೇ ಗೊತ್ತಾಗಿತ್ತು. ರೇವತಿದೇವಿಯವರಿಂದ ನನ್ನಲ್ಲಿ ಹುಟ್ಟಿದ ಸಂಶಯದ ದೃಢೀಕರಣವಾದಂತಾಯಿತು. ವಾತಾಪಿಪುರದ ರಾಜಸಿಂಹಾಸನಕ್ಕಾಗಿ ಇಷ್ಟೇಕೆ ದ್ರಾವಿಡೀಪ್ರಾಣಾಯಾಮವನ್ನು ಮಾಡಬೇಕು? ನಾನು ಬೇಕಾದ ಒಂದು ಭಾಗದ ಮಂಡಲೇಶ್ವರನಾಗಲು ಒಪ್ಪುವೆನು. ಆದಿತ್ಯವರ್ಮರೇ ಯುವರಾಜರಿರುವದರಿಂದ, ಅವರ ವಶಕ್ಕೆ ಕರ್ನಾಟಕಸಾಮ್ರಾಜ್ಯವು ಹೋದರೆ ನನಗೆ ದುಃಖವೇನು?"

"ವಿಕ್ರಮಾದಿತ್ಯ, ಈ ವಿಸ್ತಾರವಾದ ಸಾಮ್ರಾಜ್ಯವನ್ನಾಳುವ ಸಾಮರ್ಥ್ಯವು ಆದಿತ್ಯವರ್ಮ-ಚಂದ್ರಾದಿತ್ಯರಲ್ಲಿ ಇಲ್ಲವೆಂಬದು ನನ್ನ ಮನವರಿಕೆಯಾದದ್ದರಿಂದಲೇ, ನಿನ್ನನ್ನು ಭಾವೀ ಸಮ್ರಾಟನೆಂದು

ನಿರ್ಧರಿಸಿರುವೆನು. ದುರ್ಬಲರೂ ಸ್ವಾರ್ಥಿಗಳೂ ಆದವರ ವಶದಲ್ಲಿ ನನ್ನ ಕಷ್ಟಾರ್ಜಿತವಾದ ಈ ರಾಜ್ಯವನ್ನಿತ್ತು, ಇದರ ನಾಶ ಮಾಡ ಲುದ್ಯುಕ್ತನಾಗಲಾರೆನು. ಈಗ ಅವರವರಿಗೆ ಕೊಟ್ಟಿರುವ ಪ್ರಾಂತ ಗಳ ರಾಜ್ಯಭಾರವನ್ನು ತೂಗಿಸಿಕೊಂಡು ಹೋಗುವ ಕಾರ್ಯವು ಅವರಿಗೆ ದೊಡ್ಡದಾಗಿರುವಾಗ, ಅವರು ಇಡಿ ಕರ್ನಾಟಕ ಸಾಮ್ರಾ ಜ್ಯದ ಭಾರವನ್ನು ಹೇಗೆ ವಹಿಸುವರು?"

"ನಾನು ಸಿಂಹಾಸನದಲ್ಲಿ ಕುಳಿತುಕೊಂಡರೆ, ಈ ಕೃತಿಯು ಪ್ರಜಾಜನರ ದೃಷ್ಟಿಯಿಂದ ಅನ್ಯಾಯುದ್ದಾಗಿ ತೋರಬಹುದು. ಮಂಗಳೇಶರನ್ನು ಸಿಂಹಾಸನಚ್ಯುತಗೊಳಿಸುವಾಗ ಘಟಿಸಿದಂತೆ, ನನ್ನ ಮೇಲಾದರೂ ಪ್ರಸಂಗವು ಘಟಿಸಬಹುದು."

"ನೀನು ಈ ವಿಷಯದಲ್ಲಿ ಚಿಂತಿಸಬೇಡ. ನಿನ್ನ ಯೋಗ್ಯ ತೆಯು ಎಲ್ಲ ಪ್ರಜೆಗಳಿಗೆ ಗೊತ್ತಾಗಿರುವದು. ಕರ್ನಾಟಕ ಸಾಮ್ರಾ ಜ್ಯಕ್ಕೆ ನೀನೇ ಒಡೆಯನಾಗಬೇಕೆಂದು ಎಲ್ಲ ಪ್ರಜಾಜನರ ಪ್ರಬಲ ವಾದ ಇಚ್ಛೆಯಿರುವದು."

"ಮಹಾರಾಜರೆ, ಕುಮಾರ ಆದಿತ್ಯವರ್ಮ-ಚಂದ್ರಾದಿತ್ಯರು ಸಾಮ್ರಾಜ್ಯದಲ್ಲಿ ಒಡಕುಗಳನ್ನು ಹುಟ್ಟಿಸಬಹುದಾಗಿ ತೋರುವದು. ದೀರ್ಘ ಸಾಹಸ ಮಾಡಿ, ಅವರ ಮನಸ್ಸನ್ನು ಸಂತುಷ್ಟಗೊಳಿಸಲು ದ್ಯುಕ್ತರಾಗಬೇಕು."

ರೇವತಿಯು ಹೀಗೆ ನುಡಿಯಲು, ವೀರಸೇನನು ಮಹಾರಾಜ ರನ್ನು ಕುರಿತು:—"ಚಂದ್ರಾದಿತ್ಯರ ರಾಣಿಯವರಾದ ವಿಜಯಮಹಾ ದೇವಿಯವರು ಸುಸ್ವಭಾವದವರೂ ರಾಜಕಾರಣತಜ್ಞರೂ ರಾಷ್ಟ್ರಾ ಭಿಮಾನಿಗಳೂ ಇರುವರು. ರೇವತಿಯನ್ನು ಅವರ ಬಳಿಗೆ ಕಳುಹಿಸಿ, ಚಂದ್ರಾದಿತ್ಯರ ಮನಸ್ಸು ತಿರುಗಿಸುವ ಬಗ್ಗೆ ಯತ್ನ ನಡೆಯ ಬೇಕು. ವಿಜಯಮಹಾದೇವಿಯವರು ಇವಳ ಬಾಲಮಿತ್ರೆಯರಿರುವದರಿಂದ, ಅಲ್ಪಾಯಾಸದಿಂದ ಕಾರ್ಯಸಾಧನೆಯಾಗಬಹುದಾಗಿದೆ. ರೇವತಿ ಯಾದರೂ ಚಾಣಾಕ್ಷಳಿರುವಳು. ಧೂರ್ತತನದಿಂದ ಸ್ವೀಕೃತಕಾರ್ಯ

ವನ್ನು ಕೊನೆಗಾಣಿಸುವದರಲ್ಲಿ ಇವಳಂತಹ ಜಾಣರು ನಮ್ಮ ಬಳಗದಲ್ಲಿ ಸದ್ಯಕ್ಕೆ ಯಾರೂ ಇಲ್ಲ. ಪುತ್ರಿಯೆಂಬ ಅಭಿಮಾನದಿಂದ ಹೀಗೆ ಮಾತನಾಡುವೆನೆಂದು ತಿಳಿಯಬೇಡಿರಿ ವಸ್ತುಸ್ಥಿತಿಯೇ ಹೀಗಿದೆ.''

"ವೀರಸೇನರೆ, ನರ್ಮದೆಯ ಕಾಳಗದಲ್ಲಿಯೇ ಈ ನಿಮ್ಮ ಪುತ್ರಿಯ ಗುಣಗೌರವವನ್ನು ನಾನು ಚನ್ನಾಗಿ ಅರಿತಿರುವೆನು'' ಎಂದು ಪುಲಿಕೇಶಿಯು ನುಡಿದು, ಪ್ರತಾಪವರ್ಮನನ್ನು ಕುರಿತು:— "ಸೇನಾಪತಿಗಳೇ, ಈ ಕಾರ್ಯದಲ್ಲಿ ನಿಮ್ಮ ಸೊಸೆಯನ್ನು ತೊಡಗಿಸಲೊಪ್ಪುವಿರಾ?''

"ರಾಷ್ಟ್ರಕಾರ್ಯಕ್ಕಾಗಿ ಸರ್ವಸ್ವವನ್ನು ಅರ್ಪಿಸಲು ಸಿದ್ಧನಾದ ನಾನು, ಇಂತಹ ಅಲ್ಪವಾದ ಕೆಲಸದಲ್ಲಿ ಅಸಮ್ಮತಿಯನ್ನು ವ್ಯಕ್ತಪಡಿಸುವೆನೆ?'' ಎಂದು ಪ್ರತಾಪವರ್ಮನು ಪುಲಿಕೇಶಿಗೆ ಹೇಳಿ, ರೇವತಿಯನ್ನು ಕುರಿತು:— "ರೇವತಿ, ನೀನು ಈ ಕಾರ್ಯವನ್ನು ವಹಿಸುವೆಯಾ? ನೀನು ಮೊದಲು ಗುಪ್ತರೀತಿಯಿಂದ ವಿಜಯಮಹಾದೇವಿಯರನ್ನು ಕಂಡು, ಅವರಿಗೆ ಎಲ್ಲ ಸ್ಥಿತಿಯನ್ನರುಹಿ, ಹಂಚಿಕೆಯಿಂದ ಕಾರ್ಯ ಸಿದ್ಧಿಮಾಡಿಕೊಳ್ಳತಕ್ಕದ್ದೆಂಬದನ್ನು ಮರೆಯಬೇಡ. ಸಾಧಿಸಿದರೆ ಪತಿಯ ಮನಸ್ಸನ್ನಾದರೂ ತಿರುಗಿಸಲೆತ್ನಿಸು. ಸುಜ್ಞಳಾದ ನಿನಗೆ ಹೆಚ್ಚಿಗಿನ್ನೇನು ಹೇಳಲಿ? ಸ್ವೀಕೃತ ಕಾರ್ಯದಲ್ಲಿ ಯಶಸ್ಸನ್ನು ಸಂಪಾದಿಸೆಂದರಾಯಿತು. ನೀನು ವೀರಪುತ್ರಿಯಿರುವೆ. ವೀರಸ್ನುಷೆಯಿರುವೆ ವೀರಪತ್ನಿಯೆಂಬ ಅಭಿಧಾನಕ್ಕೆ ನೀನು ಪಾತ್ರಳಾಗಿರದಿದ್ದರೂ, ಆದರ್ಶ ವೀರವನಿತೆಯಿರುವೆ. ಈ ಕಾರ್ಯದಲ್ಲಿ ಯಶ ಸಂಪಾದಿಸುವದಕ್ಕಾಗಿ ನೀನು ಒಳಿತಾಗಿ ಸಾಹಸ ಮಾಡುವೆಯೆಂಬದನ್ನು ನಾನು ಅರಿತಿರುವೆನು."

"ಮಾವನವರೆ, ದೇಶಕ್ಕಾಗಿ ಪಂಚಪ್ರಾಣಗಳನ್ನರ್ಪಿಸಲು ಸಿದ್ಧಳಾದ ಈ ಆರ್ಯಲಲನೆಯು, ರಾಷ್ಟ್ರಕಾರ್ಯ ಮಾಡುವಾಗ ಯಾವ ಬಗೆಯಿಂದಲೂ ಹಿಂದಾಗಲಾರಳೆಂದು ನಿಶ್ಚಯವಾಗಿ ತಿಳಿದುಕೊಳ್ಳಿರಿ.''

"ದೇಶಕ್ಕಾಗಿ ಪಂಚಪ್ರಾಣಗಳನ್ನು ಬಲಿಯಾಗಿ ಅರ್ಪಿಸುವ ನಾರೀರತ್ನವು ನೀನಿರುವೆ! ರೇವತಿ, ಮೂರ್ಖರಾದ ನನ್ನ ಕುಮಾರರಿಗೆ ಚನ್ನಾಗಿ ಬುದ್ಧಿಗಲಿಸವ್ವಾ"

ಎಂದು ವಿಜಯಾಂಬಿಕಾ ಮಹಾರಾಜ್ಞಿಯು ಅಲ್ಲಿಗೆ ಬಂದು ನುಡಿದಳು. ಆಗ ರೇವತಿಯು ಯಾವ ವಿಧದಿಂದ ಯತ್ನಿಸಿ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂಬ ಬಗ್ಗೆ ಎಲ್ಲರ ಅಭಿಪ್ರಾಯವನ್ನು ಕೇಳಿಕೊಂಡಳು. ವಿಜಯಾಂಬಿಕಾಮಹಾರಾಜ್ಞಿಯು ತನ್ನ ಸೊಸೆಯಾದ ವಿಜಯಮಹಾದೇವಿಗೆ ಪ್ರೇಮಳ ನಿರೋಪ ಕಳುಹಿಸಿ, ದುರ್ವೃತ್ತನಾಗತೊಡಗಿರುವ ಪತಿಯನ್ನು ಹಾದಿಗೆ ತರಬೇಕೆಂದು ಸೂಚಿಸುವದಕ್ಕೆ ರೇವತಿಗೆ ಹೇಳಿದಳು.

ಭಗವಾನ್ ಅಂಶುಮಾಲಿಯು ರಂಗಭೂಮಿಯ ಮೇಲೆ ಇನ್ನೂ ಬಂದಿರಲಿಲ್ಲ. ಉಷಾಸುಂದರಿಯೂ, ಅರುಣನೂ ನಟ-ಸೂತ್ರಧಾರರಂತೆ ಆಗಮಿಸಿ, ದಿನಕರನ ಪಾತ್ರವು ಬೇಗನೆ ರಂಗಭೂಮಿಯ ಮೇಲೆ ಬರುವದೆಂಬದನ್ನು ಸೂಚಿಸತೊಡಗಿದ್ದರು. ದಿವಾನಾಟಕಕ್ಕೆ ಬೇಸರಗೊಳ್ಳುವ ತಾರಾನಾಥನು ನಿಸ್ತೇಜವದನನಾಗಿದ್ದನು. ಕ್ಷೀಣಬಲನಾದ ರಜನೀನಾಥನನ್ನು ತಿರಸ್ಕರಿಸಿ ತಾರಕೆಗಳು ಮನಬಂದತ್ತ ತೆರಳಿ ಮಾಯವಾಗತೊಡಗಿದ್ದವು. ಓಡಿ ಹೋಗುವ ತಾರಕೆಗಳ ಸುಳಿವನ್ನು ಹಿಡಿಯುವದಕ್ಕಾಗಿ ಮಾರುತನು ಮೆಲ್ಲಮೆಲ್ಲಗೆ ಸಂಚರಿಸತೊಡಗಿದ್ದನು. ಇಂತಹ ಹೃದಯಸ್ಪರ್ಶಿಯಾದ ವೇಳೆಯಲ್ಲಿ ರೇವತಿದೇವಿಯು ವಾತಾಪಿಪುರವನ್ನು ಬಿಟ್ಟು ರೇವತಿದ್ವೀಪಕ್ಕೆ ಪಯಣ ಮಾಡಿದಳು.



## ಬೋರ್ಗಲ್ಲ ಮೇಲಿನ ಮಳೆ!

ರೇವತಿಯು ವಾತಾಪಿಪುರದಿಂದ ಹೊರಟು ಸುರಕ್ಷಿತವಾಗಿ ರೇವತಿ ದ್ವೀಪವನ್ನು ತಲುಪಿದಳು. ಆಗ ಅವಳ ಪತಿಯಾದ ಶಾಂತಿವರ್ಮನು ಅಲ್ಲಿದ್ದಿಲ್ಲ. ಪುಲಿಕೇಶಿಯು ವಿರುದ್ಧ ನಡೆಯಿಸಬೇಕಾಗಿದ್ದ ಸಂಗ್ರಾಮದ ವಿಷಯಕ್ಕೆ ಮಾತು-ಕಥೆಗಳನ್ನಾಡುವದಕ್ಕಾಗಿ ಚಂದ್ರಾದಿತ್ಯನು ಅವನನ್ನು ಆದಿತ್ಯವರ್ಮನ ಬಳಿಗೆ ಕಳುಹಿಸಿದ್ದನು. ಪತಿಯು ರೇವತಿದ್ವೀಪದಲ್ಲಿಲ್ಲದ್ದರಿಂದ ರೇವತಿಗೆ ಮೈಚಳಿ ಬಿಟ್ಟು ಓಲಗಕ್ಕೂ ಅರಮನೆಗೂ ಹೋಗಿ-ಬರುವದಕ್ಕೆ ಅನುವು ದೊರೆಯಿತು. ಪತಿಯು ತಾನಾಗಿ ಸೋತು ಬರುವ ವರೆಗೆ ಅವನ ಭೆಟ್ಟಿಯಾಗಬಾರದೆಂದು ಅವಳ ಸಂಕಲ್ಪವಿದ್ದುದರಿಂದ, ಗುಪ್ತರೀತಿಯಿಂದ ವಿಜಯಮಹಾದೇವಿಗೆ-ಚಂದ್ರಾದಿತ್ಯನ ಪತ್ನಿಗೆ-ಭೆಟ್ಟಿಯಾಗಿ ಅವಳ ಮುಖಾಂತರವಾಗಿ ಚಂದ್ರಾದಿತ್ಯನನ್ನು ಶಾಂತಗೊಳಿಸಬೇಕೆಂದು ಯೋಚಿಸಿಕೊಂಡಿದ್ದಳು. ಪತಿಯು ರಾಜಧಾನಿಯಲ್ಲಿಲ್ಲದ್ದರಿಂದ ಚಂದ್ರಾದಿತ್ಯನನ್ನು ಕಾಣುವದಕ್ಕೆ ಅವಳಿಗೆ ವಿಶೇಷವಾದ ಅನುವು ದೊರೆಯಿತು

ರೇವತಿಯು ವಾತಾಪಿಪುರವನ್ನು ಬಿಟ್ಟು ಬರುವಾಗಲೆ ಪುಲಿಕೇಶಿಯು ಅಲ್ಪ ಸ್ವಲ್ಪ ಅಸ್ವಸ್ಥ ಸ್ಥಿತಿಯಲ್ಲಿದ್ದನು ಅವಳು ರೇವತಿದ್ವೀಪವನ್ನು ತಲುಪಿದ ನಾಲ್ಕು ದಿನಗಳಲ್ಲಿಯೇ ಅವನು ಅರ್ಧಾಂಗವಾತವಿಕಾರದಿಂದ ಹಾಸಿಗೆಯನ್ನು ಹಿಡಿದ ವಾರ್ತೆಯು ತಲುಪಿತು. ಚಂಡವಿಕ್ರಮನಾದ ಸಮ್ರಾಟನು ದೊಡ್ಡ ಬೇನೆಯಿಂದ ತೀರ ನಿರ್ವಿಣ್ಣನಾಗಿ ಹಾಸಿಗೆ ಹಿಡಿದದ್ದನ್ನು ಕೇಳಿ, ರೇವತಿಗೆ ಕಡು ದುಃಖವೆನಿಸಿತು. ಆಗ ಅವಳ ಮನಸ್ಸು ರಾಜಧಾನಿಯ ಕಡೆಗೆ ಎಳೆಯುತೊಡಗಿತು. ಚಂದ್ರಾದಿತ್ಯನ ಹವಣಿಕೆಯೇನಿರುವದೆಂಬದನ್ನು ತಿಳಿದುಕೊಳ್ಳುವದು ಅತ್ಯವಶ್ಯವಿದ್ದುದರಿಂದ, ಅವಳು ವಿಜಯಮಹಾದೇವಿಯಲ್ಲಿ ಅನುಸಂಧಾನ ಪ್ರಸ್ತಾಪ ತೆಗೆದಳು.

"ರಾಜ್ಞಿಯವರೆ, ನಾನು ಪುಲಿಕೇಶಿಮಹಾರಾಜರಿಗೆ ಹೊಟ್ಟೆ

ಯು ಮಗಳಿಗಿಂತಲೂ ಹೆಚ್ಚಾಗಿರುವೆನು. ನರ್ಮದೆಯ ಕಾಳಗದಲ್ಲಿ ನನ್ನಿಂದ ಅಲ್ಪ ಸ್ವಲ್ಪ ಕಾರ್ಯವು ಘಟಿಸಿದಾಗಿನಿಂದ ಮಹಾರಾಜರು ಅವಶ್ಯವಿದ್ದಾಗ ನನ್ನನ್ನು ರಾಜಕಾರಣದಲ್ಲಿ ತೊಡಗಿಸಹತ್ತಿರುವರು ನೀವು ನನ್ನ ಬಾಲಮಿತ್ರರಿರುವದರಿಂದ ನಿಮ್ಮ ಮುಖಾಂತರವಾಗಿ ಚಂದ್ರಾದಿತ್ಯರಾಜರಲ್ಲಿಯ ದ್ವೇಷಾಗ್ನಿಯನ್ನು ಶಾಂತಪಡಿಸಬೇಕೆಂದು ಮಹಾರಾಜರು ನನ್ನನ್ನು ಕಳುಹಿಸಿರುವರು ನೀವಾದರೂ ರಾಜಕಾರಣ ಧುರೀಣರಿರುವಿರಿ. ಅಂತಃಕಲಹದಿಂದ ದೇಶದ ಅವಸ್ಥೆಯು ಏನಾಗುವದೆಂಬದನ್ನು ತಮಗೆ ಹೇಳಬೇಕೆನ್ನುವಂತಿಲ್ಲ. ವಿಕ್ರಮಾದಿತ್ಯರ ಕೈಯಲ್ಲಿ ವಾತಾಪಿಪುರ ರಾಜ್ಯವನ್ನು ಕೊಡಬೇಕೆಂದು ಮಹಾರಾಜರ ಇಚ್ಛೆಯಿರುವದರಿಂದ, ಸದ್ಯದಲ್ಲಿ ಚಲನವಲನಕ್ಕೆ ಪ್ರಾರಂಭವಾಗಿರುವದು. ವಿಕ್ರಮಾದಿತ್ಯರೇ ಭಾವೀಸಮ್ರಾಟರಾಗಬೇಕೆಂದು ಮಹಾರಾಜರ ಪ್ರಬಲವಾದ ಇಚ್ಛೆಯಿರುವದರಿಂದಲೇ ಆದಿತ್ಯವರ್ಮ-ಚಂದ್ರಾದಿತ್ಯರು ವಿದ್ವೇಷಭಾವವನ್ನು ತಳೆದಿರುವರು. ನೀವೇ ನಿಸ್ಪೃಹವೃತ್ತಿಯಿಂದ ವಿಚಾರಿಸಿರಿ. ವಿಕ್ರಮಾದಿತ್ಯರು ಮಿಕ್ಕ ಬಂಧುಗಳಿಗಿಂತ ಹೆಚ್ಚಿನ ಪ್ರಭಾವಶಾಲಿಗಳಿರುವರೋ ಇಲ್ಲವೋ ನೀವೇ ಹೇಳಿರಿ. ಆದಿತ್ಯವರ್ಮ-ಚಂದ್ರಾದಿತ್ಯರು ಕರ್ನಾಟಕಸಾಮ್ರಾಜ್ಯವನ್ನು ಆಳುವ ಯೋಗ್ಯತೆಯುಳ್ಳವರಿರುವರೆಂದು ನಿಮ್ಮ ಅಭಿಪ್ರಾಯವಿದ್ದರೆ, ಅವರ ಮನಸ್ಸಿನಂತೆ ನಡೆಯುವ ಬಗ್ಗೆ ಮಹಾರಾಜರಿಗೆ ತಿಳಿಸುವೆನು ತಮ್ಮ ತರುವಾಯ ಕರ್ನಾಟಕ ಸಾಮ್ರಾಜ್ಯವು ಹೆಚ್ಚಾದ ಘನತೆಹೊಂದಬೇಕೆಂದು ಅವರ ಉತ್ಕಟೇಚ್ಛೆಯಿರುವದು. ವಿಜಯಾದೇವಿಯವರೇ, ತಿಳಿಸಿರಿ; ನಿರ್ದಾಕ್ಷಿಣ್ಯದಿಂದ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ. ದುರಭಿಮಾನದಿಂದಲೂ ಸ್ವಾರ್ಥಬುದ್ಧಿಯಿಂದಲೂ ಇಲ್ಲದ ಉಪದ್ವ್ಯಾಪ ಮಾಡುವದು ರಾಷ್ಟ್ರಕ್ಕೆ ಹಿತಕರವೇ ಹೇಗೆ?''

ರೇವತಿಯು ಹೀಗೆ ಅಸ್ಖಲಿತ ವಾಣಿಯಿಂದ ನುಡಿಯಲು, ಅವಳ ಮಾತುಗಳು ವಿಜಯಾದೇವಿಯ ಮನಸ್ಸಿನ ಮೇಲೆ ಹಿಳ್ಳಿಯು

ಪರಿಣಾಮವನ್ನುಂಟು ಮಾಡಿದವು. ಅವಳ ಸದಸದ್ವಿವೇಕಬುದ್ಧಿಗೆ ರೇವತಿಯ ಮಾತುಗಳು ಅಕ್ಷರಶಃ ಸತ್ಯವಾಗಿ ತೋರಿದವು. ಗೃಹ ಕಲಹದಿಂದ ದೇಶದ ಹಾನಿಯಾಗುವದೆಂಬ ಬಗ್ಗೆ ಅವಳು ಪತಿಗೆ ಎಷ್ಟೋ ಸಾರೆ ಹೇಳಿದ್ದರೂ, ರಾಜ್ಯಲೋಭಿಯಾದ ಅವನು ತನ್ನ ಪತ್ನಿಯ ಮಾತನ್ನು ಪೂರಾ ದುರ್ಲಕ್ಷಿಸಿದ್ದನು. ಪಟ್ಟಬಾಧ್ಯನಾದ ಆದಿತ್ಯವರ್ಮನಿಗೆ ವಾತಾಪಿಪುರದ ರಾಜ್ಯವು ದೊರೆಯಬೇಕೆಂತಲೂ ಮಿಕ್ಕವರಿಗಾದರೂ ಸಾಮ್ರಾಜ್ಯದಲ್ಲಿ ಸರಿಯಾಗಿ ಪಾಲು ದೊರೆಯ ಬೇಕೆಂತಲೂ ಅವನ ಅಭಿಪ್ರಾಯವಿತ್ತು. ರಾಜ್ಯದ ದೊಡ್ಡ ಭಾಗವು ಅನಧಿಕಾರಿಯಾದ ವಿಕ್ರಮಾದಿತ್ಯನಿಗೆ ದೊರೆತು, ಉಳಿದವರನ್ನು ಒಂದೊಂದು ಪ್ರಾಂತದ ಮಂಡಲೇಶ್ವರರನ್ನು ಮಾಡುವದು ಅನ್ಯಾಯವೆಂದು ಅವನು ತಿಳಿದಿದ್ದನು ಪುಲಿಕೇಶಿಯು ದೊಡ್ಡ ಸಾರ್ವಭೌಮನೆನಿಸಿಕೊಂಡು ಈ ರೀತಿ ಭೇದಭಾವವನ್ನು ಮಾಡತೊಡಗಿದ್ದು ಲಾಂಛನವೆಂದು ಅವನು ಗ್ರಹಿಸಿದ್ದನು. ಸಾಮಾನ್ಯ ತರಗತಿಯ ಜನರ ಹಲವಾದರೂ ಇದೇ ಮೇರೆಗೆ ಇತ್ತು. ವಿಜಯಾದೇವಿಯು ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಿಲ್ಲವೆಂತಲ್ಲ. ಚಂಡಿತನದವನಾದ ಚಂದ್ರಾದಿತ್ಯನ ಮುಂದೆ ಅವಳ ಆಟವೇನೂ ಸಾಗದ್ದರಿಂದ ಅವಳು ನಿರುಪಾಯಳಾಗಿದ್ದಳು.

ತನ್ನ ಮಾತಿಗೆ ಪ್ರತ್ಯುತ್ತರ ಕೊಡದೆ ವಿಜಯಾದೇವಿಯು ತಟಸ್ಥಳಾಗಿ ಕುಳಿತಿದ್ದನ್ನು ನೋಡಿ, ರೇವತಿಯು ವಿನಯದಿಂದಲೂ ಧೈರ್ಯದಿಂದಲೂ:—

“ರಾಜ್ಞಿಯರೆ, ಅಧಿಕಾರ-ಅನಧಿಕಾರದ ಮಾತು ಹಾಗಿರಲಿ. ಜನ್ಮದಾತನ ಮನಸ್ಸಿಗೆ ಸಂತೋಷವನ್ನುಂಟುಮಾಡುವದು ಪುತ್ರರ ಕರ್ತವ್ಯವಷ್ಟೇ? ಹಿಂದುವೇಳೆ ತಂದೆಯು ಅನ್ಯಾಯ ಮಾಡುತ್ತಿದ್ದರೂ ಅವನ ಮನಸ್ಸನ್ನು ಸಂತುಷ್ಟಗೊಳಿಸುವದಕ್ಕಾಗಿ ಆ ಅನ್ಯಾಯವನ್ನು ಸಹನ ಮಾಡುವ ಪಿತೃಭಕ್ತಪುತ್ರರು ಜಗತ್ತಿನಲ್ಲಿ ಎಷ್ಟು ಜನರಿರುವದಿಲ್ಲ! ಪಿತೃಧರ್ಮಪಾಲನೆಗಾಗಿ ಅಲ್ಪವಾದ ಸ್ವಾರ್ಥತ್ಯಾಗ

ಮಾಡಲಾಗದೆ? ಮಹಾರಾಜರು ತಮ್ಮ ಕಷ್ಟಾರ್ಜಿತ ರಾಜ್ಯವನ್ನು ಹಿಬ್ಬ ಬ್ರಾಹ್ಮಣನಿಗೆ ದಾನ ಮಾಡಲಿಕ್ಕೂ ಅಧಿಕಾರಿಗಳಿರುವರು. ಅವರಿಗೆ ಹಾಗೆ-ಹೀಗೆ ಎಂದು ನ್ಯಾಯನೀತಿಯನ್ನು ಬೋಧಿಸುವ ಅಧಿಕಾರವು ಯಾರಿಗೂ ಇಲ್ಲ. ಅವರು ಎಲ್ಲ ಮಕ್ಕಳಲ್ಲಿ ಸಮಾನ ಪ್ರೇಮವುಳ್ಳವರಿರುವರು. ಅಂತೆಯೇ ಅವರವರ ಯೋಗ್ಯತಾನು ಸಾರವಾಗಿ ರಾಜ್ಯದ ವಿಭಾಗಗಳನ್ನು ಮಾಡಿ ಕೊಟ್ಟಿರುತ್ತಾರೆ. ಈಗ ಮಹಾರಾಜರು ಅರ್ಧಾಂಗ ವಾಯುವಿಕಾರದಿಂದ ಹಾಸಿಗೆ ಹಿಡಿದಿ ರುವದಾಗಿ ತಿಳಿಯುತಲಿದೆ ಅವರು ಅಂತ್ಯಾವಸ್ಥೆಯಲ್ಲಿ ಚಿಂತೆಯಿಂದ ಬಳಲುವಂತೆ ಮಾಡುವದು ಪುತ್ರರಾದವರಿಗೆ ಯೋಗ್ಯವೆ?''

''ರೇವತಿ, ನಾನು ಎಲ್ಲವನ್ನೂ ತಿಳಿದಿರುವೆನು. ಎಷ್ಟು ಬಗೆ ಯಿಂದ ತಿಳಿಸಿ ಹೇಳಿದರೂ ಅವರು ತಮ್ಮ ದುರಾಗ್ರಹವನ್ನು ಬಿಡ ದಾಗಿರುವರು ಮಂಡಲೇಶ್ವರರಾಗಬೇಕೆಂಬ ದುಷ್ಟಲಾಲಸೆಗೊಳ ಗಾಗಿ, ಶಾಂತಿವರ್ಮರು ಅವರ ಮನಸ್ಸನ್ನು ಮತ್ತಷ್ಟು ಕೆಡಿಸತೊಡ ಗಿರುವರು. ಈಗ ನಿನ್ನ ಪತಿರಾಯರು ಊರಲಿಲ್ಲ. ನೀನೇ ಅವರನ್ನು ಕಂಡು ಎಲ್ಲ ಸಂಗತಿಯನ್ನೂ ತಿಳಿಸು.''

''ರಾಣಿಯವರೆ, ನಿಮ್ಮ ಪ್ರಯತ್ನವು ನಿಂತ ಮೇಲೆ ನಾನೂ ಯತ್ನಿಸಿ ನೋಡುವೆನು.''

''ಅನುಸಂಧಾನಕ್ಕಾಗಿ ಬಹಳ ದಿನಗಳ ವರೆಗೆ ನಿಲ್ಲಲಿಕ್ಕೆ ನಿನಗೆ ಅವಕಾಶವೆಲ್ಲಿರುವದು? ಪತಿಯು ಇಲ್ಲಿಗೆ ಬರುವದರೊಳಗೇ ಗ್ರಾಮ ತ್ಯಾಗ ಮಾಡಬೇಕೆನ್ನುವೆ. ಹಾಗಿದ್ದರೆ ನೀನು ದಿನಾವಧಿ ಮಾಡದೆ, ಇಂದೇ ಅವರಿಗೆ ಭೆಟ್ಟಿಯಾಗು. ಶಾಂತಿವರ್ಮರು ಇನ್ನೆರಡು ದಿನ ಗಳಿಗೆ ಇಲ್ಲಿಗೆ ಬರಬಹುದಾಗಿದೆ. ಆದ್ದರಿಂದ ಬೇಗನೆ ಸ್ವೀಕೃತ ಕಾರ್ಯವನ್ನು ನೆರವೇರಿಸು.''

''ನೀವಾದರೂ ಚಂದ್ರಾದಿತ್ಯರಿಗೆ ಚೆನ್ನಾಗಿ ತಿಳಿಸಿ ಹೇಳಲಿಕ್ಕೆ ಬೇಕು.''

''ರೇವತಿ, ಈ ವಿಷಯದಲ್ಲಿ ನಾನಾದರೂ ಮನಃಪೂರ್ವಕ

ವಾಗಿ ಯತ್ನಿಸುವೆನು. ಅಂತಃಕಲಹದಿಂದ ಯಾವ ಲಾಭವಿದೆ?''

ವಿಜಯಾದೇವಿಯು ಹೀಗೆ ನುಡಿಯುತ್ತಿರುವಷ್ಟರಲ್ಲಿ ಚಂದ್ರಾದಿತ್ಯನು ಅಲ್ಲಿಗೇ ಬಂದನು ಆಗ ರೇವತಿಯೂ ಅವಳೂ ಕುಳಿತ ಸ್ಥಳದಿಂದ ಎದ್ದು ನಿಂತರು. ಆಗ ಚಂದ್ರಾದಿತ್ಯನು ರೇವತಿಯನ್ನು ಕುರಿತು:—

"ರೇವತಿ, ನೀನು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುವೆಯೋ, ಅದು ನೆರವೇರುವದಿಲ್ಲವೆಂದು ಹೇಳಬೇಕಾಗಿರುವದು.''

"ಅದೇಕೆ?'' ಎಂದು ವಿಸ್ಮಯದಿಂದ ರೇವತಿಯು ನುಡಿದು, "ಈಗಾಗಲೆ ನಿಮ್ಮ ಮನಸ್ಸು ಬೇರೆ ವಿಧವಾದಂತೆ ತೋರುವದಲ್ಲ?''

"ನಾನು ಒಡಂಬಡಿಕೆಗೆ ಸಿದ್ಧನಿರುವೆನೆಂದು ನಿನಗೆ ಅಭಿವಚನವನ್ನೆಲ್ಲಿ ಇತ್ತಿದ್ದೆನು?''

"ಅಭಿವಚನವನ್ನೀಯದಿದ್ದರೂ ಮಾತಿನಲ್ಲಾದರೂ ಸೌಮ್ಯತೆಯಿತ್ತು. ಈಗ ನೀವು ಬಹಳೇ ನಿಷ್ಠುರಭಾವವನ್ನು ತಳೆದಂತೆ ತೋರುವದು.''

"ಆದಿತ್ಯವರ್ಮರು ಸಂದೇಶ ಕಳಿಸಿದಂತೆ ನಾನು ನಡೆಯಬೇಕಾಗಿರುವದು. ನಾನು ವಚನಬದ್ಧನಿರುವದರಿಂದ ಅವರಾಜ್ಞೆಗೆ ಹೊರತಾಗುವಂತಿಲ್ಲ.''

"ಆದಿತ್ಯವರ್ಮರು ಏನೆಂದು ನಿರೋಪ ಕಳುಹಿಸಿರುವರು?''

"ವಿಕ್ರಮಾದಿತ್ಯನು ಯುದ್ಧಕ್ಕಾಗಿ ಕಾಲು ಕೆದರುವಂತೆ ತೋರುತ್ತದೆ ಆದ್ದರಿಂದ ಬೇಗನೆ ಯುದ್ಧದ ಸೌರಣೆ ಮಾಡಿಕೊಳ್ಳಬೇಕೆಂದು ಆದಿತ್ಯವರ್ಮರು ತಿಳಿಸಿರುವರು''

"ಚಂದ್ರಾದಿತ್ಯ ಮಹಾರಾಜರೆ, ನೀವು ಏನಾದರೊಂದು ಕಲ್ಪಿಸಿರುವಿರಿ. ವಿಕ್ರಮಾದಿತ್ಯರು ತಾವಾಗಿ ಎಂದೂ ಯುದ್ಧಕ್ಕೆ ಸಿದ್ಧರಾಗುವದಿಲ್ಲ.''

"ವಾತಾಪಿಪುರದ ಸಿಂಹಾಸನಾಧಿಕಾರವನ್ನು ಬಿಟ್ಟು ಪೂರ್ವಕರ್ನಾಟಕದ ಒಡೆಯನಾಗಲಿಕ್ಕೆ ವಿಕ್ರಮಾದಿತ್ಯನು ಒಪ್ಪಿದರೆ,

ಮಾತ್ರ ಈ ನ್ಯಾಯ್ಯವು ಮುರಿಯುವಂತಿದೆ. ರೇವತಿ, ನೀನು ಈ ಕಾರ್ಯವನ್ನು ನೆರವೇರಿಸುವೆಯಾ?''

"ಹಾಗಾಗುವಂತಿಲ್ಲ. ವಾತಾಪಿಪುರದ ಸಾಮ್ರಾಜ್ಯ ಸಿಂಹಾಸನಕ್ಕೆ ವಿಕ್ರಮಾದಿತ್ಯರೇ ಒಡೆಯರಾಗತಕ್ಕವರು. ನೀವೆಲ್ಲರೂ ಅವರ ಮಂಡಲೇಶ್ವರರಾಗಬೇಕಾಗುವದು. ದೊಡ್ಡ ಮಹಾರಾಜರ ಇಚ್ಛೆಯು ಇದೇ ಮೇರೆಗೆ ಇರುವದರಿಂದ, ಈ ಮಾತಿನಲ್ಲಿ ಯಾವ ಬಗೆಯಿಂದಲೂ ಅಭ್ಯಂತರವಾಗಲಾರದು.''

"ನೋಡಿದೆಯಾ! ಇದೆಂಥ ಛಲವು? ಇದೆಲ್ಲಿಯ ನ್ಯಾಯವು? ಪಟ್ಟಬಾಧ್ಯರು ಮಂಡಲೇಶ್ವರರಾಗಿ, ಅನಧಿಕಾರಿಗಳು ಸಾಮ್ರಾಜ್ಯ ಸಿಂಹಾಸನದ ಸಮ್ರಾಟರಾಗಿ ಮೆರೆಯುವದು ನೀತಿಯೆನಿಸುವದೆ? ತಂದೆಯವರು ಈ ಭೇದಭಾವವನ್ನು ತಳೆದದ್ದರಿಂದಲೇ ಗೃಹಕಲಹದ ಬೇಗೆಯು ಹಬ್ಬಲಾರಂಭಿಸಿರುವದು. ವಿಕ್ರಮಾದಿತ್ಯನು ಒಬ್ಬನೇ ಶೂರನು; ಉಳಿದವರೆಲ್ಲರೂ ಹೆಂಗಳೆಯರೆಂದು ಅವರ ಅಭಿಪ್ರಾಯವಿದ್ದಂತೆ ತೋರುವದು ವಿಕ್ರಮನನ್ನು ನಾಶಗೊಳಿಸಿ, ನಾವು ವಾತಾಪಿಪುರದ ಸಾಮ್ರಾಜ್ಯ ಸಿಂಹಾಸನವನ್ನು ಆಕ್ರಮಿಸತಕ್ಕವರೇ! ಈ ಮಾತಿನಲ್ಲಿ ನಾವು ಹೆಚ್ಚು-ಕಡಿಮೆಯಾಗಗೊಡುವದಿಲ್ಲ.''

"ಮಹಾರಾಜರೆ, ಅರ್ಧಾಂಗವಾಯುವಿನಿಂದ ಹಾಸಿಗೆ ಹಿಡಿದು ಮೃತ್ಯುಪಥವನ್ನು ಸುಧಾರಿಸತೊಡಗಿದ ವೃದ್ಧಾಪ್ಯಸ್ಥಿತಿಯ ಮಾವನವರಿಗೆ ದುಃಖ ಕೊಡುವದು ಯೋಗ್ಯವಲ್ಲ. ಹಿರಿಯರ ಕೃತಿಯು ನಿಮಗೆ ಅನ್ಯಾಯವೆನಿಸುತ್ತಿದ್ದರೂ, ಅವರು ಜೀವದಿಂದಿರುವವರೆಗೆ ಆತ್ಮಸಂಯಮನ ಮಾಡಿಕೊಳ್ಳಿರಿ. ಅವರ ತರುವಾಯ ನಿಮ್ಮ-ನಿಮ್ಮ ಪರಾಕ್ರಮವನ್ನು ವ್ಯಕ್ತಪಡಿಸಿ, ಕಾರ್ಯ ಸಾಫಲ್ಯ ಮಾಡಿಕೊಳ್ಳಿರಿ. ನಿಜವಾಗಿ ಹೇಳಬೇಕಾದರೆ, ಆದಿತ್ಯವರ್ಮರಿಗಿಂತ ವಿಕ್ರಮಾದಿತ್ಯರವರು ಎಷ್ಟೋ ಪಾಲು ಹೆಚ್ಚಾದ ಪ್ರತಾಪಶಾಲಿಗಳಿರುವರೆಂಬದರಲ್ಲಿ ಸಂದೇಹವಿಲ್ಲ. ಹೇಗಿದ್ದರೂ ಮಾವನವರು ಜೀವಂತರಿರುವ ವರೆಗೆ ಸಹಿಸಿರಿ. ನಿಮ್ಮ ಈ ಒಳಜಗಳದಿಂದ ವಿಜಯಾಂಬಿಕಾ

ಅತ್ತಿಯವರು ನೊಂದುಕೊಳ್ಳಬಹುದಲ್ಲವೆ? ನೀವು ಹೀಗೆ ಬಡಿದಾಡುತ್ತ ಕುಳಿತರೆ, ಉತ್ತರಾಪಥದವರೂ ದಕ್ಷಿಣದ ಮಂಡಲೇಶ್ವರರೂ ಎದ್ದು ಕುಳಿತು, ಸಾಮ್ರಾಜ್ಯದ ಹಾನಿ ಮಾಡಲುಪಕ್ರಮಿಸಬಹುದು! ನೀವು ಎಲ್ಲವನ್ನೂ ಬಲ್ಲವರಿರುವದರಿಂದ ನಾನು ಹೆಚ್ಚಿಗೆ ಹೇಳಲಾರೆನು. ಕಳಜಗಳದಿಂದ ಎಲ್ಲರೂ ಹಾನಿಗೊಳಗಾಗುವಿರೆಂದು ನಾನು ಸಾರಿ ಹೇಳುವೆನು."

ವಿಜಯಾದೇವಿಯು ಹೀಗೆ ನುಡಿದ ಕೂಡಲೆ ರೇವತಿಯು ಅತಿ ನಿಷ್ಠುರವಾಣಿಯಿಂದ:- "ಮಹಾರಾಜರೆ, ನೀವು ಅಂತಃಕಲಹವನ್ನು ಶಾಂತ ಮಾಡದಿದ್ದರೆ ಸಾಮ್ರಾಜ್ಯಕ್ಕೆ ಬಲವಾದ ಹಾನಿಯಾಗದಿರಲಾರದು. ಹಿಂದುವೇಳೆ ಅಂತಹ ಪ್ರಸಂಗವು ಘಟಿಸಿದರೆ, ನಿಮ್ಮ ಅಪಕೃತಿಯು ಕರ್ನಾಟಕ ಇತಿಹಾಸದಲ್ಲಿ ವಜ್ರಲೇಪವಾಗಿ ಉಳಿಯುವದು!"

ರೇವತಿಯ ಈ ಮಾತಿನಿಂದ ಚಂದ್ರಾದಿತ್ಯನ ತಲೆಯು ತಿರುಗಿತು. ತನ್ನ ಪಕ್ಷವು ಸತ್ಪಕ್ಷವೆಂದೂ, ಪುಲಿಕೇಶಿಯು ಅನ್ಯಾಯದಿಂದ ವಿಕ್ರಮಾದಿತ್ಯನಿಗೆ ಸಾಮ್ರಾಜ್ಯಾಧಿಕಾರವನ್ನು ಕೊಡಲೆತ್ನಿಸಿ ಅನ್ಯಾಯ ಮಾಡತೊಡಗಿರುವನೆಂದೂ ಅವನ ಭಾವನೆಯಾಗಿತ್ತು. ರೇವತಿಯು ಪಕ್ಷಪಾತಭಾವದಿಂದ ವಿಕ್ರಮನ ಹಾಗು ತಂದೆಯಾದ ಪುಲಿಕೇಶಿಯ ಪಕ್ಷವನ್ನು ಹಿಡಿದು ಮಾತನಾಡತೊಡಗಿರುವಳೆಂದೂ, ಅವಳ ಬಾಲಸಖಿಯಾದ ತನ್ನ ಪತ್ನಿಯು ಅವಳ ಮಾರ್ಗವನ್ನೇ ಅನುಸರಿಸಿರುವಳೆಂದೂ ಚಂದ್ರಾದಿತ್ಯನು ತಿಳಿದನು. ಆಗ ಅವನು ಸ್ಪಷ್ಟವಾದ ಮಾತಿನಿಂದ:—

"ರೇವತಿ! ವಿಕ್ರಮಾದಿತ್ಯನನ್ನು ಪರಾಭವಗೊಳಿಸಿ, ಪಟ್ಟಬಾಧ್ಯರಾದ ಆದಿತ್ಯವರ್ಮರಿಗೆ ಸಾಮ್ರಾಜ್ಯಾಧಿಕಾರವು ದೊರೆಯುವಂತೆ ಮಾಡಬೇಕೆಂದು ನನ್ನ ಸತ್ಯಸಂಕಲ್ಪವಿರುವದು. ನನ್ನೀ ನಿಶ್ಚಯವು ಎಂದೂ ಬೇರೆಯಾಗಲಾರದು!"

ರೇವತಿಯ ಬೋಧವು 'ಬೋರ್ಗಲ್ಲ ಮೇಲೆ ಮಳೆ ಸುರಿದಂತೆ' ನಿರರ್ಥಕವಾಯಿತು!

---

# ಈಶ ಸಂಕಲ್ಪ!

ವೀರ ಸಮ್ರಾಟನಾದ ಪುಲಿಕೇಶಿ ಸಾರ್ವಭೌಮನ ತೀರ ಕೊನೆಯ ಆಯುಷ್ಯವು ಬಹು ದುಃಖಕಾರಕವಾಗಿ ಪರಿಣಮಿಸಿತು. ಅವನು ಅರ್ಧಾಂಗವಾತದಿಂದ ತೀರ ಅಶಕ್ತನಾಗಿದ್ದನು. ಜೀವಚ್ಛವದಂತೆ ಅವನ ಅವಸ್ಥೆಯಾಗಿತ್ತು. ಪತಿಯು ಈ ಘನವಾದ ಬೇನೆಯಿಂದ ಬದುಕುವದಿಲ್ಲವೆಂಬದು ಸಾಧ್ವಿಶಿರೋಮಣಿಯಾದ ವಿಜಯಾಂಬಿಕಾ ಮಹಾರಾಜ್ಞಿಗೆ ತಿಳಿಯಿತು. ಪತಿಯು ಜೀವಂತನಿರುವಾಗಲೇ ಸೌಭಾಗ್ಯದಿಂದ ಅನುಗಮನವನ್ನು ಸೇರಬೇಕೆಂದು ಆ ಮಹಾಸತಿಯ ಹೆಬ್ಬಯಕೆಯಿತ್ತು. ಪರಮೇಶ್ವರನು ಅವಳ ಏಕನಿಷ್ಠ ಸ್ವಭಾವಕ್ಕೆ ಮೆಚ್ಚಿ, ಅವಳನ್ನು ತನ್ನ ಸನ್ನಿಧಿಯಲ್ಲಿ ಕರೆದುಕೊಂಡನು. ತನ್ನ ಕಣ್ಣೆದುರಿನಲ್ಲಿ ಪತ್ನಿಯು ಇಹಲೋಕವನ್ನು ತ್ಯಜಿಸಿದ ಬಗ್ಗೆ ಪುಲಿಕೇಶಿಗೆ ಆನಂದವಾಗಿದ್ದರೂ, ಮನುಷ್ಯನ ಸ್ವಾಭಾವಿಕ ಮನೋಧರ್ಮಕ್ಕನುಸಾರವಾಗಿ-ಅವನು ಪತ್ನಿಯ ಮರಣಕ್ಕಾಗಿ ಕ್ಲೇಶಪಡುತ್ತಿದ್ದನು. ವಿಜಯಾಂಬಿಕಾರಾಜ್ಞಿಯು ಮಡಿದ ಮೇಲಂತೂ ಅವನು ತೀರ ಅಶಕ್ತನಾದನು.

ತನ್ನ ತರುವಾಯ ಕರ್ನಾಟಕ ಸಾಮ್ರಾಜ್ಯದ ಗೌರವವನ್ನು ವಿಕ್ರಮಾದಿತ್ಯನು ಕಾಯ್ದುಕೊಳ್ಳುವನೆಂದು ಪುಲಿಕೇಶಿಯು ಸಂಭ್ರಮಗೊಂಡಿದ್ದನು; ಆದರೆ ಅಂತಃಕಲಹದ ಬೇಗೆಯು ಹತ್ತಿ ರಾಜ್ಯಕ್ಕೆ ಹಾನಿಯೊದಗುವವರೆಗೆ ಪ್ರಸಂಗವೊದಗಿದ್ದರಿಂದ, ಅವನ ಮನಸ್ಸು ಅತ್ಯಂತ ಚಿಂತಾಕ್ರಾಂತವಾಗಿತ್ತು. ತಾನು ಮಾಡಿದ ಯೋಜನೆಯಿಂದ ಫಲಪ್ರಾಪ್ತಿಯಾಗದೆ, ವಿಪರೀತ ಸ್ಥಿತಿಯು ಒದಗತೊಡಗಿದ್ದನ್ನು ನೋಡಿ, ಅವನು ದಿಙ್ಮೂಢನಾದನು. ಈ ಸಂಧಿಯಲ್ಲಿ ಅವನ ಪ್ರಕೃತಿಯು ಒಳಿತಾಗಿದ್ದರೆ, ಅಂತಃಕಲಹದ ಬೇಗೆಯು ಹೆಚ್ಚಾಗಿ ಪಸರಿಸುತ್ತಿದ್ದಿಲ್ಲ. ಅವನು ಉಪಾಯದಿಂದ ಎಲ್ಲರನ್ನೂ ಶಾಂತಿಗೊಳಿಸುವ ಹಂಚಿಕೆ ಮಾಡುತ್ತಿದ್ದನು. ಈಗ ಅವನು ತೀರ ಪರಾಧೀನತೆಯನ್ನು ಹೊಂದಿದ್ದರಿಂದ, ಯಾವ ಕೆಲಸವನ್ನೂ ಮಾಡಲಾರದವ

ನಾಗಿದ್ದನು. 'ಈಶ ಸಂಕಲ್ಪವಿದ್ದಂತಾಗಲಿ!' ಎಂದು ಅವನು ತಟಸ್ಥ ವೃತ್ತಿಯನ್ನು ತಳೆದಿದ್ದನು.

ತಂದೆಯ ಯೋಜನೆಗೆ ವಿರುದ್ಧವಾಗಿ ನಡೆದು ಪಿತೃದ್ರೋಹ ವೆಸಗತೊಡಗಿದ ಆದಿತ್ಯವರ್ಮ-ಚಂದ್ರಾದಿತ್ಯರಿಗೆ ಚೆನ್ನಾಗಿ ಪ್ರಾಯಶ್ಚಿತ್ತವನ್ನು ಕೊಡಬೇಕೆಂದು ವಿಕ್ರಮಾದಿತ್ಯನು ಸೇನಾ ಸನ್ನಾಹ ಮಾಡತೊಡಗಿದನು. ಚಂದ್ರಾದಿತ್ಯ-ಆದಿತ್ಯವರ್ಮರು ದಂಡೆತ್ತಿ ಹೊರಡುವವರಿರುವರೆಂಬ ಸಂಗತಿಯು ರೇವತೀದೇವಿಯಿಂದ ಅವನಿಗೆ ತಿಳಿದಿತ್ತು. ಆದಿತ್ಯವರ್ಮನಿಗೆ ವಾತಾಪಿಪುರದ ಸಾಮ್ರಾಜ್ಯ ಸಿಂಹಾಸನವು ದೊರೆಯುವದಕ್ಕಾಗಿ ತಾನು ಸಾಹಸ ಮಾಡುವೆನೆಂದು ಚಂದ್ರಾದಿತ್ಯನು ರೇವತಿಯ ಸಮ್ಮುಖದಲ್ಲಿ ಹೇಳಿದ ಸಂಗತಿಯನ್ನು ಕೇಳಿದಾಗಿನಿಂದ ವಿಕ್ರಮಾದಿತ್ಯನ ಸಂತಾಪವು ದ್ವಿಗುಣಿತವಾಗಿತ್ತು. ಅವನು ಗುಪ್ತಚಾರರ ಮುಖಾಂತರವಾಗಿ ಶತ್ರುಗಳ ಚಲನವಲನವನ್ನು ತಿಳಕೊಳ್ಳತೊಡಗಿದ್ದನು. ರೇವತಿದ್ವೀಪದ ಮೇಲೆ ದಂಡೆತ್ತಿ ಹೋಗಿ ಚಂದ್ರಾದಿತ್ಯನನ್ನು ಹಣ್ಣು ಮಾಡಬೇಕೆಂದು ಅವನು ಸನ್ನಾಹ ನಡೆಯಿಸಿದಾಗ, ಅಕಸ್ಮಾತ್ತಾಗಿ ವಿಜಯಾಂಬಿಕಾ ಮಹಾರಾಣಿಯು ಇಹಲೋಕವನ್ನು ತ್ಯಜಿಸಿದ್ದರಿಂದ, ಅವನು ಆ ಸ್ಥಿತಿಯಲ್ಲಿ ದಂಡಯಾತ್ರೆಯನ್ನು ನಿಲ್ಲಿಸಬೇಕಾಯಿತು.

ವಿಜಯಾಂಬಿಕೆಯು ಮರಣ ಹೊಂದಿದ ಮೇಲೆ ಕೆಲವು ದಿನಗಳ ವರೆಗೆ ಉಭಯಪಕ್ಷದವರು ತಟಸ್ಥರಾಗಿದ್ದರು. ಈ ಕಾಲದಲ್ಲಿ ಪುಲಿಕೇಶಿಯ ಶರೀರದ ಸ್ಥಿತಿಯು ತೀರ ಕೆಟ್ಟಿತ್ತು. ತಂದೆಯ ದೇಹಾರೋಗ್ಯವು ದಿನದಿನಕ್ಕೆ ಕೆಡತೊಡಗಿದ್ದರಿಂದ, ವಿಕ್ರಮಾದಿತ್ಯನು ಯುದ್ಧದ ಗೊಂದಲದಲ್ಲಿ ತೊಡಗಿರಲಿಲ್ಲ. ಅವನು ತಟಸ್ಥವೃತ್ತಿಯನ್ನವಲಂಬಿಸಿದ ಸಂಧಿಯನ್ನು ಸಾಧಿಸಿ, ಆದಿತ್ಯವರ್ಮ-ಚಂದ್ರಾದಿತ್ಯರು ವಾತಾಪಿಪುರದ ಮೇಲೆ ದಂಡೆತ್ತಿ ಹೋಗಬೇಕೆಂದು ನಿಶ್ಚಯಿಸಿಕೊಂಡರು. ಯುದ್ಧದ ಸಿದ್ಧತೆಯನ್ನು ಯಾವ ಯಾವ ರೀತಿಯಿಂದ ಮಾಡಬೇಕೆಂಬ ಬಗ್ಗೆಯೂ, ಉಭಯ ಸೈನ್ಯಗಳು ಎಲ್ಲಿ ಕೂಡ

ಬೇಕೆಂಬ ಬಗ್ಗೆಯೂ ಈರ್ವರ ನಡುವೆ ಪತ್ರವ್ಯವಹಾರವು ನಡೆದು, ಎಲ್ಲ ಕಾರ್ಯಗಳನ್ನೂ ಪೂರ್ತೈಸಿಕೊಂಡರು. ಶಿರಹಟ್ಟಿಯು ನೆರೆಯಲ್ಲಿ ಉಭಯತರ ಸೈನ್ಯಗಳನ್ನು ಕೂಡಿಸಬೇಕೆಂತಲೂ, ಅಲ್ಲಿಂದ ಮುಂದೆ ವಾತಾಪಿಪುರದ ಮೇಲೆ ಸಾಗಿ ಹೋಗಬೇಕೆಂತಲೂ ಅವರು ಗೊತ್ತು ಮಾಡಿಕೊಂಡರು.

ವಿಕ್ರಮಾದಿತ್ಯನು ಗುಪ್ತಚರರ ಮುಖಾಂತರವಾಗಿ ಅವರ ಕಾರಸ್ಥಾನಗಳನ್ನು ತಿಳಿದಿದ್ದನು ಉಭಯತರ ಸೈನ್ಯಗಳು ಕೂಡಿದರೆ ಅವರ ಬಲವೇ ಹೆಚ್ಚಾಗಬಹುದೆಂದು ಅವನು ಭಾವಿಸಿ, ಎರಡೂ ದಂಡುಗಳು ಕೂಡದಂತೆ ವ್ಯವಸ್ಥೆ ಮಾಡಬೇಕೆಂದು ಹವಣಿಸಿದನು. ಅವನು ಪ್ರತಾಪವರ್ಮ ಸೇನಾಪತಿಯನ್ನು ರೇವತಿದ್ವೀಪದ ದಾರಿಗೆ ಕಳುಹಿ, ಚಂದ್ರಾದಿತ್ಯನ ಪಾರಿಪತ್ಯಗೊಳಿಸಬೇಕೆಂದು ತಾನು ಆದಿತ್ಯ ವರ್ಮನ ಮೇಲೆ ಸಾಗಿ ಹೋಗಿ ಅವನ ಸೇನೆಯನ್ನು ನುಗ್ಗು-ನುಗ್ಗು ಮಾಡಬೇಕೆಂದು ಎಣಿಕೆ ಹಾಕಿದ್ದನು.

ಪ್ರತಾಪವರ್ಮನು ಕೆಲವು ದಂಡಿನೊಡನೆ ಚಂದ್ರಾದಿತ್ಯನಿಗೆ ಎದುರಾಗಲು ಹೊರಟನು. ವಿಕ್ರಮಾದಿತ್ಯನು ತನ್ನ ಸೇನೆಯೊಡನೆ ಆದಿತ್ಯವರ್ಮನ ಮೇಲೆ ಸಾಗಿದನು. ಆದಿತ್ಯವರ್ಮ-ಚಂದ್ರಾದಿತ್ಯರ ಸೇನೆಗಳು ಒಂದೆರಡು ದಿನಗಳಲ್ಲಿ ಶಿರಹಟ್ಟಿಯ ಬಳಿಯಲ್ಲಿ ಕೂಡ ತಕ್ಕವಿದ್ದವು. ಇಷ್ಟರಲ್ಲಿ ವಿಕ್ರಮಾದಿತ್ಯನು ಮುಂಜಾಗ್ರತೆಯಿಂದ ಅವರ ಸೇನೆಗಳು ಕೂಡದಂತೆ ವ್ಯವಸ್ಥೆ ಮಾಡಿದನು. ಆಯಿತು; ಯುದ್ಧವು ಪ್ರಾರಂಭವಾಯಿತು. ಪ್ರತಾಪವರ್ಮ-ಚಂದ್ರಾದಿತ್ಯರಿಗೂ, ಆದಿತ್ಯವರ್ಮ-ವಿಕ್ರಮಾದಿತ್ಯರಿಗೂ ತುಮುಲವಾದ ಸಂಗ್ರಾಮವು ನಡೆಯಿತು!

ಪಲ್ಲವರು ಚಾಲುಕ್ಯಸಾಮ್ರಾಜ್ಯದ ಕಡು ಹಗೆಗಳಾಗಿದ್ದರಷ್ಟೆ; ಪುಲಿಕೇಶಿಯು ಅವರಿಗೆ ದಯೆಯನ್ನು ತೋರಿಸಿದ್ದೆಂದರೆ, 'ಹಾವಿಗೆ ಹಾಲೆರೆದ'ಂತಾಗಿತ್ತು. ಪಲ್ಲವ ರಾಜನಾದ ನರಸಿಂಹವರ್ಮನು ಹೊತ್ತು ಸಾಧಿಸಿ ವಾತಾಪಿಪುರವನ್ನು ಮುತ್ತಬೇಕೆಂದು ಹೊಂಚು

ಹಾಕಿದ್ದನು ಮೊದಲು ಅವನಿಗೆ ಯೋಗ್ಯ ಕಾಲವೊದಗಿರಲಿಲ್ಲ. ಪುಲಿಕೇಶಿಯು ಹಾಸಿಗೆಯನ್ನು ಹಿಡಿದ ವರ್ತಮಾನವು ತಗಲಿದೊಡನೆಯೆ ಅವನು ಯುದ್ಧದ ಸಿದ್ಧತೆಯಲ್ಲಿ ತೊಡಗಿದನು. ಕರ್ನಾಟಕ ಸಾಮ್ರಾಜ್ಯದಲ್ಲಿ ಅಂತಃಕಲಹವು ಪ್ರಾದುರ್ಭವಿಸಿ, ಅದು ಅತ್ಯಂತ ಪ್ರಕೋಪಕ್ಕೆ ಮುಟ್ಟಿರುವದೆಂಬ ವಾರ್ತೆಯಾದರೂ ಅವನಿಗೆ ತಗಲಿತು. ಆಗ ಮಾತ್ರ ಅವನ ಆನಂದಕ್ಕೆ ಪಾರಾವಾರವಿಲ್ಲದಾಯಿತು! ಅವರಲ್ಲಿಯ ಹೊಳಜಗಳದ ಲಾಭ ಮಾಡಿಕೊಳ್ಳಬೇಕೆಂದು ಅವನು ಹಾರೈಸಿಕೊಂಡಿದ್ದನು. ವಿಕ್ರಮಾದಿತ್ಯನು ವಾತಾಪಿಪುರವನ್ನು ಬಿಟ್ಟು ದಂಡಯಾತ್ರೆಗೆ ತೆರಳಿದ ಕೂಡಲೆ, ಅವನಿಗೆ ಸುಸಂಧಿಯು ದೊರೆದಂತಾಯಿತು. ಇದೇ ವೇಳೆಯಲ್ಲಿ ವಾತಾಪಿಪುರದ ಮೇಲೆ ದಂಡೆತ್ತಿ ಹೋದರೆ, ತನಗೆ ನಿಶ್ಚಯವಾಗಿಯೂ ಜಯ ಪ್ರಾಪ್ತಿಯಾಗುವದೆಂದು ಅವನು ತಿಳಿದನು. ಹಿಂದಕ್ಕೆ ಕಂಚಿಯನ್ನು ಸುಟ್ಟು ವಿಧ್ವಂಸಗೊಳಿಸಿದ್ದರ ಸೇಡನ್ನು ತೀರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಅವನು ಹೇರಳ ಸೈನ್ಯದೊಡನೆ ವಾತಾಪಿಪುರದ ಮಾರ್ಗವನ್ನು ಹಿಡಿದನು.

ಕರ್ನಾಟಕ ಸಾಮ್ರಾಜ್ಯದ ಅಭ್ಯುದಯವನ್ನು ನೋಡಿ ಸಹಿಸದವರು ಆಗ ಎಷ್ಟೋ ಜನರಿದ್ದರು. ಪುಲಿಕೇಶಿಯು ಬೇನೆಬಿದ್ದದರಿಂದಲೂ, ಗೃಹಕಲಹದ ಬೇಗೆಯಿಂದ ಸಾಮ್ರಾಜ್ಯದ ಬಲವು ನಾಶವಾಗತೊಡಗಿದ್ದರಿಂದಲೂ ಎಷ್ಟೋ ಮಂಡಲೇಶ್ವರರು ಇದೇ ಸಮಯದಲ್ಲಿ ಸ್ವತಂತ್ರರಾಗಬೇಕೆಂದು ನಿರ್ಧರಿಸಿಕೊಂಡು ನರಸಿಂಹವರ್ಮನನ್ನು ಕೂಡಿದ್ದರು.

ವಾತಾಪಿಪುರದಲ್ಲಿ ಸಣ್ಣ ತರಗತಿಯ ಇಬ್ಬರು ಸೇನಾಪತಿಗಳೂ, ಅತ್ಯಲ್ಪ ಸೇನೆಯೂ ಮಾತ್ರ ಇತ್ತು. ನಗರರಕ್ಷಣೆಯ ಕಾರ್ಯವನ್ನು ವೀರಸೇನನು ವಹಿಸಿದ್ದನು. ಸೈನ್ಯದ ಬಹು ಭಾಗವು ದಂಡಯಾತ್ರೆಗೆ ತೆರಳಿದ್ದರಿಂದ, ರಾಜಧಾನಿಯಲ್ಲಿಯ ಸೇನೆಯು ನಿರುಪಯುಕ್ತವಾಗಿತ್ತು. ಪರಚಕ್ರಗಳನ್ನು ತಡೆಯುವ ಸಾಮರ್ಥ್ಯವು ಆ ಸೈನ್ಯ

ಕ್ಕಿರಲಿಲ್ಲ ಇಷ್ಟು ಶತ್ರುಗಳನ್ನು ತಡೆದು ಹಾಕಿದ ಮೇಲೆ ರಾಜಧಾನಿಗೆ ಭಯವೇನೆಂದು ವಿಕ್ರಮಾದಿತ್ಯನು ಹೆಚ್ಚು ಸೈನ್ಯವನ್ನು ಅಲ್ಲಿ ಬಿಟ್ಟಿದ್ದಿಲ್ಲ. ಭವಿಷ್ಯತ್ಕಾಲೀನ ಭೀಷಣ ಚಿತ್ರವು ಮುಂದಾಗಿ ಅವನಿಗೆ ಹೇಗೆ ಕಾಣುವದು!

ವಿಕ್ರಮಾದಿತ್ಯನು ಸಸೈನ್ಯನಾಗಿ ರಾಜಧಾನಿಯನ್ನು ಬಿಟ್ಟು ತೆರಳಿದ ಸಂಗತಿಯು ನರಸಿಂಹವರ್ಮನಿಗೆ ತಿಳಿದ ಕೂಡಲೆ, ಅವನು ಹೇರಳವಾದ ಸೈನ್ಯದೊಡನೆ ಹೊರಟು ವಾತಾಪಿಪುರವನ್ನು ಮುತ್ತಿದನು. ಬಹಳ ದಿವಸಗಳಿಂದ ಹೊತ್ತಿಕೊಡಗಿದ್ದ ಹೊಟ್ಟೆಯೊಳಗಿನ ಕಿಚ್ಚನ್ನು ವಿಲಕ್ಷಣವಾದ ರೀತಿಯಿಂದ ಶಾಂತಪಡಿಸಿಕೊಳ್ಳಬೇಕೆಂದು ಅವನು ಹಾರೈಸಿಕೊಂಡಿದ್ದನು ಕಂಚಿಯು ಕದನದ ಸೇಡನ್ನು ಅದೇ ರೀತಿಯಾಗಿ ತೀರಿಸಿಕೊಳ್ಳಬೇಕೆಂದು ಅವನ ದೃಢಸಂಕಲ್ಪವಿತ್ತು. ನರಸಿಂಹವರ್ಮನು ವಾತಾಪಿಪುರವನ್ನು ಬಿಗಿಯಾಗಿ ಮುತ್ತಿದನು. ವೀರಸೇನನೂ ಇನ್ನುಳಿದ ಒಬ್ಬಿಬ್ಬರು ಸೇನಾಪತಿಗಳೂ ರಾಜಧಾನಿಯಲ್ಲಿದ್ದ ಅಲ್ಪ ಸೇನೆಯೊಡನೆ ಕಾಳಗಕ್ಕೆ ಅಣಿಯಾದರು. ನವ್ಯ ಸ್ಫೂರ್ತಿಯಿಂದ ಕಾದತೊಡಗಿದ ನರಸಿಂಹವರ್ಮನು ಸ್ವಲ್ಪ ವೇಳೆಯಲ್ಲಿ ವಿಜಯಶಾಲಿಯಾಗುವನೆಂಬ ಚಿಹ್ನವು ತೋರಲಾರಂಭಿಸಿತು. ಅವನು ಸುರಂಗಗಳಿಂದ ಕೋಟೆಯ ಗೋಡೆಗಳನ್ನು ಒಡೆಯಿಸುವ ಸಾಹಸ ನಡೆಯಿಸಿದನು. ಅವನ ಈ ಕಾರ್ಯಕ್ಕೆ ಯಶವೂ ಪ್ರಾಪ್ತಿಯಾಯಿತು. ಕೂಡಲೆ ಅವನು ತನ್ನ ಸೈನ್ಯವನ್ನು ತೆಗೆದುಕೊಂಡು ರಾಜಧಾನಿಯನ್ನು ನುಗ್ಗಿದನು. ವೀರಸೇನನು ಆ ಸೈನ್ಯವನ್ನು ತಡೆಯುವದಕ್ಕೆ ಮಾಡಿದ ಯತ್ನವೆಲ್ಲ ನಿಷ್ಫಲವಾಯಿತು. ರೇವತಿಯು ಪುರುಷವೇಷವನ್ನು ಧರಿಸಿ ಶತ್ರುಗಳೊಡನೆ ವೀರಾವೇಶದಿಂದ ಕಾದತೊಡಗಿದ್ದಳು; ಆದರೆ ಅಲ್ಪ ಸಂಖ್ಯಾಕಸೈನಿಕರ ಆಟವು, ನರಸಿಂಹವರ್ಮನ ಮಹಾಸೇನೆಯ ಮುಂದೆ ಹೇಗೆ ನಡೆಯಬೇಕು? ಅಪಜಯದ ಸೊಲ್ಲನ್ನರಿಯದ ಕನ್ನಡಿಗರಿಗೆ ಅಂದಿನ ಸಂಗ್ರಾಮದಲ್ಲಿ ಅಪಯಶವೊದಗಿ, ರಾಜಧಾನಿಯು ನಾಶವಾಗುವ ಸಮಯವು ಬಂದಿ

ತೆಂದು ಅವಳು ವ್ಯಸನಪಡತೊಡಗಿದಳು; ಆದರೂ ಅವಳು ಯುದ್ಧ ಕಾರ್ಯವನ್ನು ನಿಲ್ಲಿಸಲಿಲ್ಲ. ಅಷ್ಟರಲ್ಲಿ ಮಂತ್ರಿಯೂ, ಅವಳ ತಂದೆಯೂ ಆದ ವೀರಸೇನನು ಧಾರಾತೀರ್ಥದಲ್ಲಿ ಶಯನ ಮಾಡಿದನು. ಸೈನಿಕರು ಯುದ್ಧ ಭೂಮಿಯಿಂದ ಕಾಲ್ತೆಗೆಯುವ ಲಕ್ಷಣವು ತೋರಲಾರಂಭಿಸಿತು. ರೇವತಿಯು ಈ ಎಲ್ಲ ಬಗೆಯ ಅನರ್ಥಗಳಿಂದ ಜರ್ಜರಿತಳಾದಳು. ಕೆಲವು ವೇಳೆಯ ವರೆಗಾದರೂ ಪಲ್ಲವ ಸೈನ್ಯವನ್ನು ತಡೆಯುವ ಬಗ್ಗೆ ಅವಳು ಸೇನಾಪತಿಗೆ ತಿಳುಹಿಸಿ, ಅರಮನೆಯ ಕಡೆಗೆ ವೇಗದಿಂದ ಸಾಗಿದಳು.

ಜೀವಚ್ಛವನಾದ ಪುಲಿಕೇಶಿಯು ರೇವತಿಯ ಆಗಮನವಾದದ್ದನ್ನು ನೋಡಿ ಆನಂದದಿಂದ:—

"ಕುಮಾರಿ, ಎಲ್ಲವೂ ಶುಭವೆ?"

"ಮಹಾರಾಜರೆ, ಸರ್ವವೂ ನಾಶವಾಗುವ ಸಮಯವೊದಗಿತು. ಶತ್ರುಗಳು ರಾಜಧಾನಿಯನ್ನು ಪ್ರವೇಶಿಸಿದರು ನೀವು ಈಗಲೆ ಇಲ್ಲಿಂದ ಹೊರಡಿರಿ. ಇಲ್ಲಿದ್ದರೆ ಪರಿಣಾಮವು ಹಿತಾಗದು ಮೇಣೆಯು ಸಿದ್ಧವಿರುವದು. ಗುಪ್ತಮಾರ್ಗದಿಂದ ಇಲ್ಲಿಂದ ಜಾರಿ ಹೋಗುವದೇ ಯುಕ್ತವೆನಿಸುವದು."

"ಏನು? ನರಸಿಂಹವರ್ಮನು ರಾಜಧಾನಿಯನ್ನು ಪ್ರವೇಶಿಸಿದನೆ?" ಎಂದು ಪುಲಿಕೇಶಿಯು ವಿಸ್ಮಯದಿಂದ ನುಡಿದು, ದುಃಖದಿಂದ:—

"ರೇವತಿ! ಅಂತಃಕಲಹದ ದುಷ್ಪರಿಣಾಮವಿದು! ಹಾಯ್! ಹಾಯ್! ಉತ್ತರಾಪಥದ ಸಮ್ರಾಟನಾದ ಹರ್ಷವರ್ಧನನನ್ನು ಪರಾಭವಗೊಳಿಸಿದ ಕರ್ನಾಟಕ ಸಾಮ್ರಾಜ್ಯಕ್ಕೆ, ಈಗ ಯಃಕಶ್ಚಿತ ಪಲ್ಲವರಾಜನನ್ನು ಹಿಂದಕ್ಕಟ್ಟುವ ಸಾಮರ್ಥ್ಯವು ಉಳಿಯದಾಯಿತೆ? ಸೋಲರಿಯದ ನನಗೆ ವಾತಾಪಿಪುರ ರಾಜಧಾನಿಯು ಅನ್ಯರಿಂದ ನಾಶವಾಗತೊಡಗಿದ ದೃಶ್ಯವನ್ನು ನೋಡುವ ಪ್ರಸಂಗವೊದಗಿತೆ?"

"ಮಹಾರಾಜರೆ, ಸಮಯವು ಗತಿಸಿ ಹೋಗಿರುವದು. ಗೃಹ

ಕಲಹದಿಂದ ನಿರ್ವೀರ್ಯರಾದವರನ್ನು ಸಣ್ಣ ಯೋಗ್ಯತೆಯ ಜನರು ಸಹ ನಾಶ ಮಾಡಬಹುದೆಂಬ ದೃಷ್ಟಾಂತವನ್ನು ನೋಡಿ, ಮುಂದಾದರೂ ಜನರು ಬುದ್ಧಿಗಲಿಯಲಿ!" ಎಂದು ನುಡಿದು, ರೇವತಿಯು ವಿನಯದಿಂದ:—"ಮೇಣೆಯಲ್ಲಿ ಕುಳಿತುಕೊಳ್ಳಿರಿ. ಇಲ್ಲಿಂದ ಬೇಗನೆ ಪಾರಾಗದಿದ್ದರೆ ದುರವಸ್ಥೆಯನ್ನು ಹೊಂದಬೇಕಾಗುವದು."

"ರೇವತಿ! ವೈರಿಗಂಜಿ ಕಾಲ್ದೆಗೆಯುವ ಪ್ರಸಂಗವೊದಗಿತೆ? ದೇವಾ! ನನ್ನನ್ನು ಈ ಬಗೆಯಾಗಿ ಪರಾಧೀನನ್ನಾಗಿ ಮಾಡಿದೆಯಾ? ಸದಾ ವಿಜಯಿಯಾದ ನಾನು, ಈ ಬಗೆಯ ಸೋಲಿನ ರೂಪರೇಖೆಗಳನ್ನು ನೋಡಬೇಕೆಂಬ ಸಂಕಲ್ಪದಿಂದ ನನ್ನನ್ನು ಇನ್ನೂ ಜೀವದಿಂದಿಟ್ಟಿರುವೆಯಾ? ರೇವತಿ, ನರಸಿಂಹವರ್ಮನು ಮಾಡಿದ ಅತ್ಯಾಚಾರದ ಸೇಡನ್ನು ಐಕ್ಯದಿಂದ ಕಾದಿ ತೀರಿಸಿಕೊಳ್ಳಬೇಕೆಂದು ನನ್ನ ಎಲ್ಲ ಮಕ್ಕಳಿಗೂ ಅರುಹು!"

"ಮಹಾರಾಜರೆ, ಈಗ ವ್ಯಸನ ಮಾಡಿ ಫಲವೇನು? ನರಸಿಂಹವರ್ಮನು ಬೇಗನೆ ಅರಮನೆಯನ್ನು ಪ್ರವೇಶಿಸಬಹುದಾಗಿದೆ. ಬೇಗನೆ ಗುಹೆಯನ್ನು ಸೇರೋಣ"

ರೇವತಿಯು ಹೀಗೆ ನುಡಿದ ಕೂಡಲೆ ಪುಲಿಕೇಶಿಯು ನೆಲಮಾರ್ಗದಿಂದ ಸಮೀಪದಲ್ಲಿದ್ದ ಗುಹೆಗೆ ಹೊರಡಲೊಪ್ಪಿದನು. ಸೇವಕರು ಅವನನ್ನು ಎತ್ತಿ ಮೇಣೆಯಲ್ಲಿ ಹಾಕಿದರು. 'ಕರ್ತುಮ ಕರ್ತುಮನ್ಯಥಾ ಕರ್ತುಂ' ಶಕ್ತಿಯುತನಾಗಿದ್ದ ಪುಲಿಕೇಶಿಯ ಮನಸ್ಸಿನ ಸ್ಥಿತಿಯು ಆಗ ಹೇಗಾಗಿರಬಹುದೆಂಬದನ್ನು ವರ್ಣಿಸುವದು ಅಸಾಧ್ಯವೇ ಸರಿ!

ನರಸಿಂಹವರ್ಮನು ಚಾಲುಕ್ಯರ ದಂಡನ್ನೆಲ್ಲ ಪರಾಭವಗೊಳಿಸಿದನು. ಅದು ರಾಜಧಾನಿಯನ್ನು ರಕ್ಷಿಸಲಾರದೆ ದಾರಿ ದೊರೆತ ಕಡೆಗೆ ಓಡತೊಡಗಿತು. ನರಸಿಂಹವರ್ಮನು ರಾಜಧಾನಿಯನ್ನು ಹೊಕ್ಕು, ಕೊಳ್ಳೆ-ಕೊಲೆ-ಸುಲಿಗೆಗೆ ಪ್ರಾರಂಭಿಸಿದನು ಇಡಿ ಪಟ್ಟಣವನ್ನು ಉಧ್ವಸ್ತಗೊಳಿಸಬೇಕೆಂದು ಅವನು ಸಂಕಲ್ಪ ಮಾಡಿಕೊಂಡಿ

ದ್ದಂತೆ ತೋರುತ್ತಿತ್ತು. ಎತ್ತ ನೋಡಿದತ್ತ ಸುಡುವ ಮನೆಗಳೂ, ಭೋರಿಟ್ಟು ಪ್ರಲಾಪಿಸತೊಡಗಿರುವ ದೀನಜನರ ತಂಡಗಳೂ ಕಾಣ ತೊಡಗಿದವು ಅವನು ಅನನ್ವಿತ ಕೃತಿಗಳನ್ನಾಚರಿಸುತ್ತ ಅರಮನೆಗೆ ಬಂದನು. ಅದನ್ನಾದರೂ ವಿಧ್ವಂಸಮಾಡಬೇಕೆಂದು ಆ ದುಷ್ಮನ್ನನು ದುರಾಕಾಂಕ್ಷೆ ತಳೆದು, ಅದಕ್ಕೆ ಅಗ್ನಿಸಂಸ್ಕಾರ ಮಾಡಲು ಸೈನಿಕರಿಗೆ ಆಜ್ಞಾಪಿಸಿದನು. ಕರ್ನಾಟಕ ಸಾಮ್ರಾಜ್ಯದ ರಾಜಮಂದಿರವು ಕೆಲವು ಗಳಿಗೆಗಳಲ್ಲೀ ಅತ್ಯಂತ ಭೀಷಣಜ್ವಾಲೆಯಿಂದ ಎದೆಯೊಡಿಸು ವಂತೆ ಕಾಣಲಾರಂಭಿಸಿತು!

ಪುಲಿಕೇಶಿ ಮಹಾರಾಜನು ನೆಲಮಾರ್ಗದಿಂದ ಒಂದು ಗುಹೆ ಯಲ್ಲಿ ತರಲ್ಪಟ್ಟಿದ್ದನು. ರೇವತಿಯು ಪುರುಷವೇಷದಿಂದ ನರಸಿಂಹ ವರ್ಮನ ಸೇನೆಯಲ್ಲಿ ಬೆರೆತು, ಅವರು ನಡೆಯಿಸುತ್ತಿರುವ ಸರ್ವಾನರ್ಥ ಕಾರಕ ಸಂಗತಿಗಳನ್ನು ನಿರೀಕ್ಷಿಸತೊಡಗಿದ್ದಳು. ಅರಮನೆಗೆ ಕೊಳ್ಳಿ ಯಿಟ್ಟ ಕೂಡಲೆ ಅವಳಿಂದ ಅಲ್ಲಿ ನಿಲ್ಲುವದಾಗಲಿಲ್ಲ ಕೂಡಲೆ ಗುಪ್ತ ಮಾರ್ಗದಿಂದ ಅವಳು ಪುಲಿಕೇಶಿಯು ಬಳಿಗೆ ಬಂದು:—

"ಮಹಾರಾಜರೆ! ಸರ್ವಸ್ವವೂ ಘಾತವಾಯಿತು! ಶತ್ರು ಗಳು ಅರಮನೆಗೆ ಕೊಳ್ಳಿಯಿಕ್ಕಿದರು! ರಾಜಧಾನಿಯನ್ನು ಸುಟ್ಟು ಸೂರೆ ಮಾಡಿದರು! ನರಸಿಂಹವರ್ಮನು ರಾಜಧಾನಿಯಲ್ಲಿ ನಡೆಯಿ ಸಿರುವ ಅತ್ಯಾಚಾರಗಳನ್ನು ಕಣ್ಣಿನಿಂದ ನೋಡಲಾಗಸಲ್ಲ! ಎಂದಾ ದರೂ ಕರ್ನಾಟಕ ಸಾಮ್ರಾಜ್ಯಕ್ಕೆ ಕೇಡುಂಟಾಗುತ್ತಿದ್ದರೆ, ಅದು ಪಲ್ಲವರಿಂದಲೆ! ಎಂದು ಪ್ರತಾಪವರ್ಮ ಮಾವನವರು ಅಂದ ಸಂಗತಿ ಯನ್ನು ನೀವು ಹೇಳುತ್ತಿದ್ದಿರಲ್ಲವೆ? ಅವರ ಆ ಭವಿಷ್ಯವಾಣಿಯು ಇಂದು ಪೂರಾ ಸತ್ಯವಾಯಿತು. ರಾಜಧಾನಿಯಂತೂ ಪೂರ್ಣವಾಗಿ ವಿಧ್ವಂಸವಾಯಿತು!"

"ರೇವತೀ! ಕರ್ನಾಟಕ ಸಾಮ್ರಾಜಕ್ಕೆ ಪೂರ್ಣವಾಗಿ ಪರಾ ಜಯ ಪ್ರಾಪ್ತವಾದದ್ದಲ್ಲದೆ, ಕನ್ನಡಿಗರ ಅಭಿಮಾನದ-ಕರ್ನಾಟಕದ ಗೌರವದ ಕರ್ಮಕ್ಷೇತ್ರವಾದ ವಾತಾಪಿಪುರವು ಪೂರ್ಣವಾಗಿ ನಾಶ

ನಾಯಿತೆ! ಈ ವೀರಪುಲಿಕೇಶಿಯು ರಾಜಧಾನಿಯಲ್ಲಿರುವಾಗಲೆ ಇಂತಹ ಅನರ್ಥವೊದಗಿತೆ! ಈಶ ಸಂಕಲ್ಪ! ಈಶ ಸಂಕಲ್ಪ!! ಈಶ ಸಂಕಲ್ಪ!!!"

ತತ್‌ಕ್ಷಣದಲ್ಲಿ ಕರ್ನಾಟಕ ಸಮ್ರಾಟನಾದ ಪುಲಿಕೇಶಿಯ ದಿವ್ಯವಾದ ಆತ್ಮವು ಜಡದೇಹವನ್ನು ತ್ಯಜಿಸಿ, ಸುರಲೋಕವನ್ನು ಹೊಂದಿತು! ಈಶ ಸಂಕಲ್ಪಕ್ಕೆ ಮಾನವೀ ಯತ್ನವೇನಿರುವದು?



## ಉಪಸಂಹಾರ.

ಪಲ್ಲವ ರಾಜನಾದ ನರಸಿಂಹವರ್ಮನು ರಾಜಧಾನಿಯನ್ನು ಸೂರೆಗೊಂಡನೆಂದೂ, ಈ ಸರ್ವಾನರ್ಥಕರ ಸಂಗತಿಯಿಂದ ಪುಲಿಕೇಶಿಯು ಎದೆಯೊಡೆದುಕೊಂಡು ಪ್ರಾಣ ಬಿಟ್ಟನೆಂದೂ ಒಳ್ಳಾರಿ-ಕರ್ನೂಲ ಪ್ರಾಂತಗಳಲ್ಲಿ ಬಡಿದಾಡುತ್ತಿದ್ದ ವಿಕ್ರಮಾದಿತ್ಯ-ಆದಿತ್ಯವರ್ಮರ ಕಿವಿಗೆ ಈ ವಾರ್ತೆಯು ರೇವತಿಯ ಮುಖಾಂತರ ಕಠೋರವಾಗಿ ಅಪ್ಪಳಿಸಿತು. ಈ ಭಯಂಕರವಾದ ಸುದ್ದಿಯನ್ನು ಕೇಳಿ ಇಬ್ಬರೂ ಹಾಹಾರಿದರು! ತಾವು ಏನು ಮಾಡಿದ್ದರಿಂದ ಇಂತಹ ಅನರ್ಥವೊದಗಿತೆಂಬುದನ್ನು ಇಬ್ಬರೂ ಮನಃಪೂರ್ವಕವಾಗಿ ಯೋಚಿಸತೊಡಗಿದರು. ತಮ್ಮಿಬ್ಬರ ನ್ಯಾಯವು ಮೂರನೆಯವರಾದ ಪಲ್ಲವರಿಗೆ ಲಾಭ ಮಾಡಿಕೊಟ್ಟಿತೆಂದು ಅವರು ಹಳಹಳಿಸತೊಡಗಿದರು. ತಮ್ಮ ಈ ಸ್ವಾರ್ಥಮೂಲಕವಾದ ಹಗೆತನದಿಂದ ಕರ್ನಾಟಕ ಸಾಮ್ರಾಜ್ಯಕ್ಕೂ ಚಾಲುಕ್ಯರ ಮನೆತನಕ್ಕೂ ಹಾನಿ ತಟ್ಟಿತೆಂದು ಅವರು ಮರಮರನೆ ಮರುಗಿದರು. ತಮ್ಮ ವಂಶಾಭಿಮಾನವು ಇಬ್ಬರಲ್ಲಿಯೂ ಉಕ್ಕೇರಿತು. ಪಲ್ಲವರು ರಾಜಧಾನಿಯನ್ನು ಹಾಳು ಮಾಡುತ್ತಿರುವಾಗ ಪಟ್ಟದ ಸಲುವಾಗಿ ತಾವು ಬಡಿದಾಡತೊಡಗಿದ್ದು ಕಡುಮೂರ್ಖತನವಾಯಿತೆಂದು ಅವರು ಪಶ್ಚಾತ್ತಾಪಪಡತೊಡಗಿದರು.

ಪುಲಿಕೇಶಿಯು ಅತ್ಯಂತ ದುಃಖದಿಂದ ಮರಣಹೊಂದಿದ್ದನ್ನೂ ರಾಜಧಾನಿಯು ಹಾಳಾದದ್ದನ್ನೂ ಕೇಳಿ, ವಿಕ್ರಮಾದಿತ್ಯನಿಗೆ ಹೇಳ ಕೂಡದಷ್ಟು ವ್ಯಸನವಾಗಿತ್ತು. ತನಗೆ ಪಟ್ಟವು ಬೇಕಾಗಿಲ್ಲವೆಂತಲೂ ಪಲ್ಲವರೊಡನೆ ಬಡಿದಾಡಲಿಕ್ಕೆ ತನ್ನ ಸಿದ್ಧತೆಯಿರುವದೆಂತಲೂ ಅವನು ಆದಿತ್ಯವರ್ಮನಿಗೆ ಹೇಳಿದನು. ಈರ್ವರೂ ಶುದ್ಧಾಂತಃಕರಣದಿಂದ ಭೆಟ್ಟಿಯಾಗಿ ಒಬ್ಬರನ್ನೊಬ್ಬರು ಅಪ್ಪಿಕೊಂಡು, ತಮ್ಮ ದಡ್ಡತನಕ್ಕೆ ಕಣ್ಣೀರು ಸುರಿಸಿದರು. ಅಷ್ಟರೊಳಗೆ ಚಂದ್ರಾದಿತ್ಯನ ಮೇಲೆ ಹೋದ ದಳವಾಯಿಯು ಅವನೊಡನೆ ಒಪ್ಪಂದ ಮಾಡಿಕೊಂಡನೆಂಬ ಸಂತೋಷದ ಸುದ್ದಿಯು ಬಂತು. ವಾತಾಪಿಪುರದ ಮೇಲೆ ಸಾಗಿ ಬರಬೇಕೆಂದು ಚಂದ್ರಾದಿತ್ಯನಿಗೂ ದಳವಾಯಿಗೂ ಹೇಳಿ ಕಳುಹಿಸಿ, ಇತ್ತ ಈ ಬಂಧುಗಳು ತಮ್ಮ ದಳದೊಂದಿಗೆ ರಾಜಧಾನಿಯ ದಾರಿಯನ್ನು ಹಿಡಿದರು.

ರೇವತಿದೇವಿಯು ವಿಕ್ರಮಾದಿತ್ಯನ ಶಿಬಿರದಲ್ಲಿದ್ದಾಗ ಶಾಂತಿವರ್ಮನು ಅವಳಿಗೆ ಬೆಟ್ಟಿಯಾಗಿ, ತನ್ನ ಮೂರ್ಖಕೃತಿಯ ಬಗ್ಗೆ ಪಶ್ಚಾತ್ತಾಪವನ್ನು ವ್ಯಕ್ತಮಾಡಿದನು. ರೇವತಿಯ ತಂದೆಯಾದ ವೀರಸೇನನು ಮರಣ ಹೊಂದಿದ ಸಂಗತಿಯನ್ನು ಕೇಳಿ, ಅವನು ದುಃಖಪ್ರದರ್ಶನ ಮಾಡಿದನು. ಮುಂದಾದರೂ ಯೋಗ್ಯವಾದ ಆಚರಣೆಯನ್ನಿಟ್ಟು ಯಶೋಭಾಗಿಗಳಾಗಬೇಕೆಂದು ರೇವತಿಯು ಪತಿದೇವರಿಗೆ ಸೆರಗೊಡ್ಡಿ ಬೇಡಿಕೊಂಡಳು.

ಚಾಲುಕ್ಯರ ಅಮೋಘವಾದ ಸೈನವು ವಾತಾಪಿಪುರದ ಮೇಲೆ ಸಾಗಿ ಬರುತ್ತದೆಂಬ ಸಂಗತಿಯನ್ನು ಕೇಳಿ, ಕಂಚಿಯ ನರಸಿಂಹವರ್ಮನು ಗಾಬರಿಯಾದನು. ಮುಂದೆ ಏನು ಮಾಡಬೇಕೆಂಬದು ಅವನಿಗೆ ತಿಳಿಯದಾಯಿತು. ಚಾಲುಕ್ಯರ ದಂಡಿನ ಕೈಯಲ್ಲಿ ಸಿಲುಕಿದರೆ ನುಗ್ಗಾಗುವೆನೆಂದು ಅವನು ತಳಮಳಿಸಹತ್ತಿದನು. ಕೂಡಲೆ ಅವನು ಕೈಗೆ ಸಿಕ್ಕಷ್ಟು ಚಾಲುಕ್ಯರ ಸಂಪತ್ತನ್ನು ದೋಚಿಕೊಂಡು, ಹೇಳದೆ-ಕೇಳದೆ ಕಾಲಿಗೆ ಬುದ್ಧಿ ಹೇಳಿದನು!

'ಪಲ್ಲವರನ್ನು ಹಿಡಿದು-ಕಡಿದು-ಕತ್ತರಿಸಬೇಕೆ'ಂದು ಸಿಟ್ಟಿನಿಂದ ಹೊರಟ ಆದಿತ್ಯವರ್ಮ-ವಿಕ್ರಮಾದಿತ್ಯ-ಚಂದ್ರಾದಿತ್ಯರು ವಾತಾಪಿಪುರಕ್ಕೆ ಬಂದು ನೋಡಲು, ಅಲ್ಲಿ ಪಲ್ಲವರ ಒಂದು ಪಿಳ್ಳೆಯಾದರೂ ಇದ್ದಿಲ್ಲ ಅವರು ಹಾಳಾದ ರಾಜಧಾನಿಯನ್ನು ನೋಡಿ ಬಹಳವಾಗಿ ದುಃಖಿಸಿದರು. ಶೌರ್ಯಸಾಗರನಾದ ತಮ್ಮ ತಂದೆಯು ಪ್ರಾಣಬಿಟ್ಟ ಸ್ಥಳವನ್ನು ನೋಡಿ, ಅವರು ಪರಿಪರಿಯಿಂದ ಪ್ರಲಾಪಿಸಿದರು. ನಾಲ್ವರು ಮಕ್ಕಳಿದ್ದು, ತಂದೆಯ ಅಂತ್ಯಕಾಲದಲ್ಲಿ ಒಬ್ಬರೂ ಇಲ್ಲದಂತಾಯಿತೆಂದು ಅವರು ಪಶ್ಚಾತ್ತಾಪಗೊಂಡರು.

ಆದಿತ್ಯವರ್ಮನು ವಾತಾಪಿಪುರದ ಸಿಂಹಾಸನದಲ್ಲಿ ವಿರಾಜಮಾನನಾದನು ಅವನು ತನ್ನ ಬಂಧುಗಳನ್ನು ಕೂಡಿಕೊಂಡು ಹೇರಳ ಸೈನ್ಯದೊಡನೆ ಪಲ್ಲವರನ್ನು 'ತ್ರಾಹಿ ಭಗವಾನ್' ಎಂದೆನಿಸಿಬಿಟ್ಟನು

ನಾಲ್ವರು ಬಂಧುಗಳೂ ಒಕ್ಕಟ್ಟಿನಿಂದ ನಡೆದು, ಕರ್ನಾಟಕ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ದೀರ್ಘಸಾಹಸ ಮಾಡತೊಡಗಿದ್ದನ್ನು ಪುಲಿಕೇಶಿಯ ಕಣ್ಣುಗಳು ಕಾಣಲಿಲ್ಲ. ಈಶ ಸಂಕಲ್ಪ!



# ಶ್ರೀ ಶೇಷಾಚಲ ಪ್ರೆಸ್ಸ,

## ಆನಂದವನ.



ನಮ್ಮಲ್ಲಿ

ಎಲ್ಲ

ತರದ

ಕನ್ನಡ,

ಮರಾಠಿ,

ಇಂಗ್ಲಿಶ ಭಾಷೆಯ

ಪ್ರಿಂಟಿಂಗ

ಕೆಲಸಗಳೂ;

ಬಾಯಿಂಡಿಂಗ,

ಸಂಟಬಂಗ

**ಮುಂತಾದವುಗಳೂ**

**ಸುಂದರವಾಗಿಯೂ ತೀವ್ರವಾಗಿಯೂ**

**ಮಾಡಿ ಕೊಡಲ್ಪಡುವವು.**

**ದರಗಳು ಸುಲಭ. ಕೆಲಸ ಕಳಿಸಿ ಅನುಭವ ಪಡೆಯಿರಿ.**

**ಭಿ. ಪ. ಕಾಳೆ, ಮ್ಯಾನೇಜರ.**